ಲಭ್ಯವಿರುವ ವಿಳಾಸಕ್ಕೆ ನೋಂದಣಿ ಅಂಚೆ ಮೂಲಕ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಆರೋಪಿಯು ಕಾರಣ ಕೇಳಿ ನೋಟೀಸನ್ನು ಪಡೆದು 1 ತಿಂಗಳು ಕಳೆದರೂ ಇದುವರೆಗೂ ವಾಹನದ ಹಕ್ಕು ಸಾಧಿಸಿ ಈ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ.

ಎಡಿಪಿಯವರು ಪ್ರಕರಣದ ಕಡತ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ತಮ್ಮ ವಾದವನ್ನು ಮಂಡಿಸಿದ್ದಾರೆ. ಪರವಾನಿಗೆ ಇಲ್ಲದೇ 10 ಲೀ. ಕಳ್ಳಭಟ್ಟಿ ಸಾರಾಯಿಯನ್ನು ವಾಹನ ಟಿವಿಎಸ್ ಛಾಂಪ್ ಸಂ:ಕೆಎ–15–ಇ–7518 ರಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿರುವಾಗ ಆರೋಪಿಯಿಂದ ಜಪ್ತು ಮಾಡಲಾಗಿದೆ. ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿದ ಮುದ್ದೆಮಾಲು ಅಬಕಾರಿ ಪದಾರ್ಥವಾಗಿರುವುದಾಗಿ ದೃಢಪಡುತ್ತದೆ. ಈ ಪ್ರಕರಣದಲ್ಲಿ ಅಬಕಾರಿ ಕಾಯಿದೆ ಉಲ್ಲಂಘನೆಯಾಗಿರುವುದು ಸ್ಪಷ್ಟವಾಗುತ್ತದೆ. ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟೀಸಿಗೆ ವಾಹನ ಮಾಲೀಕರು ಪಡೆದು ತಮ್ಮ ಉತ್ತರದಲ್ಲಿ ಪ್ರಕರಣದಲ್ಲಿನ ಅಪರಾಧಕ್ಕೂ ತಮಗೂ ಯಾವುದೇ ಸಂಬಂಧವಿರುವುದಿಲ್ಲವೆಂದು ತಿಳಿಸಿರುತ್ತಾರೆ ಮತ್ತು ಸದರಿ ವಾಹನ ಹಾಗೂ ಮುದ್ದೆಮಾಲನ್ನು ತಮ್ಮದೆಂದು ಹಕ್ಕು ಸಾಧಿಸಿ ಬೇರೆಯಾರೂ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣವನ್ನು ಕಲಂ 43 ಸಿ ಅಡಿ ವಿಲೇಗೊಳಿಸಿ ಪ್ರಕರಣದಲ್ಲಿ ಜಪ್ತಾದ ಅಬಕಾರಿ ಪದಾರ್ಥ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದ ಕಡತ, ದಾಖಲಾತಿಗಳನ್ನು, ಎಡಿಪಿಯವರ ವಾದವನ್ನು ಹಾಗೂ ಅಬಕಾರಿ ಕಾಯಿದೆಯ ಕಲಂಗಳನ್ನು ಪರಿಶೀಲಿಸಲಾಯಿತು. ವಾಹನ ಮಾಲೀಕರಿಗೆ ಲಭ್ಯವಿರುವ ವಿಳಾಸಕ್ಕೆ ನೋಟೀಸ್‌ನ್ನು ಕಳುಹಿಸಲಾಗಿರುತ್ತದೆ. ಕಾರಣ ಕೇಳಿ ನೋಟೀಸ್ ಅನ್ನು ವಾಹನದ ಮಾಲೀಕರು ಪಡೆದುಕೊಂಡು ತಮ್ಮ ಉತ್ತರದಲ್ಲಿ ಪ್ರಕರಣದಲ್ಲಿನ ಅಪರಾಧಕ್ಕೂ ತಮಗೂ ಯಾವುದೇ ಸಂಬಂಧವಿರುವುದಿಲ್ಲವೆಂದು ತಿಳಿಸಿರುತ್ತಾರೆ. ವಾಹನ ಜಪ್ತಾಗಿ 2 ವರ್ಷ ಕಳೆದರೂ ಇದುವರೆಗೂ ತಮ್ಮದೆಂದು ಹಕ್ಕು ಸಾಧಿಸಿ ಬೇರೆಯಾರೂ ಸಹ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ.ಈ ಹಿನ್ನೆಲೆಯಲ್ಲಿ ಮಾನ್ಯ ಎಡಿಪಿಯವರ ವಾದಕ್ಕೆ ಮನ್ನಣೆ ದೊರೆಯಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ/ ಡಿಟಿಸಿಆರ್/174/2007–08 ದಿನಾಂಕ:24ನೇ ಡಿಸೆಂಬರ್, 2009**

ಪ್ರಸ್ತಾವನೆಯಲ್ಲಿನ ವಿವರಗಳನ್ನು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 ಸಿ ನಲ್ಲಿ ದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಜೆ. ಕೃಷ್ಣ ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ 10 ಲೀ. ಕಳ್ಳಭಟ್ಟಿ ಸಾರಾಯಿ ಮತ್ತು ವಾಹನ ಟಿವಿಎಸ್ ಛಾಂಪ್ ಸಂ:ಕೆಎ–15–ಇ–7518 ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಪ್ರಕರಣದಲ್ಲಿ ಜಪ್ತಾದ 10 ಲೀ. ಕಳ್ಳಭಟ್ಟಿ ಸಾರಾಯಿಯಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಪ್ರಮಾಣವನ್ನು ಹೊರತು ಪಡಿಸಿ ಉಳಿದ ಪ್ರಮಾಣದ ಕಳ್ಳಭಟ್ಟಿ ಸಾರಾಯಿಯನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಎ)(3) ರ ರೀತ್ಯಾ ಅಬಕಾರಿ ಉಪ ಅಧೀಕ್ಷಕರು, ಸಾಗರ ಉಪ ವಿಭಾಗ ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:24–12–2009 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಪಿ.ಆರ್.217 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**
**ಪ್ರಕರಣ ಸಂ: 18 / 1990–91 ದಿನಾಂಕ:29ನೇ ಮೇ, 1991**
**ಆದೇಶ ಸಂ: ಇಎಕ್ಸ್‌ಇ/ಡಿಟಿಸಿಆರ್/377/1990–91 ದಿನಾಂಕ:30ನೇ ಡಿಸೆಂಬರ್, 2009**

**ಉಪಸ್ಥಿತರು :** ಶ್ರೀ ಜೆ. ಕೃಷ್ಣ
ಪ್ರಾಧೀಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

| **ಫಿರ್ಯಾದಿ** | **ಆರೋಪಿಗಳು** |
|---|---|
| 1. ಪೊಲೀಸ್ ಸಬ್ ಇನ್ಸ್‌ಪೆಕ್ಟರ್,<br>ಕೋಟೆ ಪೊಲೀಸ್ ಠಾಣೆ, ಶಿವಮೊಗ್ಗ.<br>ಗುನ್ನೆ ನಂ: 118/91<br>ದಿನಾಂಕ : 27–5–1991 | ಶಾಮ್ ಬಿನ್ ರಾಮಪ್ಪ ಆಟೋಚಾಲಕ, ಮನೆ ನಂ:26<br>2ನೇ ಕ್ರಾಸ್ ಅಶೋಕನಗರ ಶಿವಮೊಗ್ಗ |
| 2. ಅಬಕಾರಿ ಸಬ್ ಇನ್ಸಪೆಕ್ಟರ್,<br>ಶಿವಮೊಗ್ಗ ನಂ.1 ಉಪವಲಯ. | |

**ಅರ್ಜಿದಾರರು ಹಾಗೂ ವಾಹನದ ಮಾಲೀಕರು:**

ಶಾಮ್ ಬಿನ್ ರಾಮಪ್ಪ ಆಟೋಚಾಲಕ, ಮನೆ ನಂ:26 2ನೇ ಕ್ರಾಸ್ ಅಶೋಕನಗರ ಶಿವಮೊಗ್ಗ

**ಪ್ರಸ್ತಾವನೆ:**

ದಿನಾಂಕ:27–05–1991 ರ0ದು ಮಧ್ಯಾಹ್ನ 12–35 ಗ0ಟೆಯ ಸಮಯದಲ್ಲಿ ಶಿವಮೊಗ್ಗ ನಗರದ ಗೋಪಿ ವೃತ್ತದ ಹತ್ತಿರ 1ನೇ ಫಿರ್ಯಾದುದಾರರು ರಸ್ತೆ ಕಾವಲು ಮಾಡುತ್ತ ವಾಹನ ತಪಾಸಣೆ ಮಾಡುತ್ತಿದ್ದಾಗ ಸರ್ಕಾರಕ್ಕೆ ತೆರಿಗೆ ಕೊಡದ 31.200 ಲೀಟರ್ ಬಿಯರ್‌ನ್ನು ವಾಹನ ಆಟೋರಿಕ್ಷಾ ಸಂ: ಸಿಟಿಎಸ್–7629 ರಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಹಚ್ಚಿದ್ದಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 34 ರ ರೀತ್ಯಾ ಅಪರಾಧವಾಗಿದ್ದು ಇದೇ ಕಾಯ್ದೆ ಕಲಂ 35 ರ ಪ್ರಕಾರ ಶಿಕ್ಷಾರ್ಹವಾಗಿರುತ್ತದೆ. ಆದ್ದರಿಂದ ಪೋಲಿಸ್ ಸಬ್ ಇನ್ಸಪೆಕ್ಟರ್, ಜಯನಗರ ಪೋಲೀಸ್ ಠಾಣೆ ಇವರು ಗುನ್ಹೆ ಸಂಖ್ಯೆ : 118/ 91 ದಿನಾ0ಕ: 27–05–1991 ರ0ತೆ ಮೊಕದ್ದಮೆ ದಾಖಲಿಸಿ ವಾಹನ ಮತ್ತು ಬಿಯರ್‌ನ್ನು ವಶಪಡಿಸಿಕೊಂಡು ಅಬಕಾರಿ ಇಲಾಖೆಗೆ ಹಸ್ತಾಂತರಿಸಿದ ಮೇರೆಗೆ ಅಬಕಾರಿ ಇನ್ಸ್‌ಪೆಕ್ಟರ್, ಶಿವಮೊಗ್ಗ ನಂ: 1 ರ ಉಪ ವಲಯ ಇವರು ಪ್ರ.ಮಾ.ವ. ಸಂಖ್ಯೆ : 18/90–91 ದಿನಾಂಕ:29–05–1991 ರಂತೆ ಮೊಕದ್ದಮೆ ದಾಖಲಿಸಿರುತ್ತಾರೆ.

ಆರೋಪಿ ಹಾಗೂ ವಾಹನದ ಮಾಲೀಕನಾದ ಶಾಮ್ ಬಿನ್ ರಾಮಪ್ಪ ಆಟೋಚಾಲಕ, ಮನೆ ನಂ: 26 2ನೇ ಕ್ರಾಸ್ ಅಶೋಕನಗರ ಶಿವಮೊಗ್ಗ, ಇವರು ಎ.ಟಿ. ಮಲ್ಯ, ವಕೀಲರು, ಶಿವಮೊಗ್ಗ ಇವರ ಮೂಲಕ ಅರ್ಜಿ ಸಲ್ಲಿಸಿ ವಾಹನ ಆಟೋರಿಕ್ಷಾ ಸಂ: ಸಿಟಿಎಸ್–7629 ವಾಹನವನ್ನು ತಾತ್ಕಾಲಿಕ ಬಿಡುಗಡೆಗೆ ಕೋರಿರುತ್ತಾರೆ. ರೂ. 20,000/– ಮೊತ್ತದ ಇಂಡೆಂನಿಟಿ ಬಾಂಡ್ ಮತ್ತು ಅದೇ ಮೊತ್ತದ ಶೂರಿಟಿಯನ್ನು ಪಡೆದುಕೊಂಡು ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲಾಗಿದೆ.

ಕರ್ನಾಟಕ ಅಬಕಾರಿ ಕಾನೂನು ಕಲಂ 43(ಬಿ) ರಡಿ ವಾಹನ ಮಾಲೀಕರಿಗೆ ಈ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಕಾರಣ ಕೇಳಿ ನೋಟೀಸ್ ದಿನಾಂಕ:13–12–1993 ರಂದು ಜಾರಿ ಮಾಡಲಾಗಿತ್ತು. ಆದರೆ ಸದ್ರಿ ಕಾರಣ ಕೇಳಿ ನೋಟೀಸ್‌ಗೆ ವಾಹನ ಮಾಲೀಕರಾದ ಎದುರುದಾರರು ಯಾವುದೇ ಉತ್ತರ ನೀಡಿರುವುದಿಲ್ಲ.

ನಂತರ ಈ ಪ್ರಕರಣವನ್ನು ವಿಚಾರಣೆಗಾಗಿ ತೆಗೆದುಕೊಂಡು ಸರ್ಕಾರದ ಪರ ವಿಚಾರಣೆ ಮಾಡಿದ ಇಬ್ಬರು ಸಾಕ್ಷಿದಾರರ ಹೇಳಿಕೆಗಳನ್ನು ಹಾಗೂ ಅರ್ಜಿದಾರರ ಪರ ಸಾಕ್ಷಿದಾರರ ಹೇಳಿಕೆಯನ್ನು ದಾಖಲಿಸಿಕೊಳ್ಳಲಾಯಿತು. ಈ ಪ್ರಕರಣದಲ್ಲಿ ಈ ಕೆಳಗಿನ ವಿವಾದಾಂಶವನ್ನು ತೀರ್ಮಾನಿಸಬೇಕಾಗಿರುತ್ತದೆ.

1. ದಿನಾಂಕ:27–05–1991 ರಂದು ಆಟೋ ರಿಕ್ಷಾ ಸಂ: ಸಿಟಿಎಸ್–7629 ರಲ್ಲಿ ಕಾನೂನು ವಿರುದ್ಧವಾಗಿ 31.200 ಲೀ. ಬಿಯರನ್ನು ಸಾಗಾಟ ಮಾಡಲಾಗುತ್ತಿತ್ತು ಎಂಬುದನ್ನು ಫಿರ್ಯಾದಿ ಪರ ಸಾಬೀತುಪಡಿಸಲಾಗಿದೆಯೇ?
2. ವಾಹನ ಮಾಲೀಕರು ಇಲ್ಲವೇ ಅವರ ಪ್ರತಿನಿಧಿ ಇಲ್ಲವೇ ವಾಹನವನ್ನು ಜಪ್ತುಮಾಡಿದ ಕಾಲಕ್ಕೆ ಅದರ ಸುಪರ್ದಿ ಹೊಂದಿದ್ದ ವ್ಯಕ್ತಿ ಇವರುಗಳು ಸದರಿ ವಾಹನದಲ್ಲಿ ಕಾನೂನು ಬಾಹಿರವಾಗಿ ಮದ್ಯ ಸಾಗಾಟ ಮಾಡಿರುವುದು ತಮ್ಮ ತಿಳುವಳಿಕೆ ಅಥವಾ ಪರಿಜ್ಞಾನದಿಂದ ಉಂಟಾಗಿರುವುದಿಲ್ಲವೆಂದು, ಹಾಗೂ ಸದರಿ ವಾಹನವನ್ನು ಅಕ್ರಮ ಮದ್ಯ ಸಾಗಾಟ ಮಾಡಲು ಉಪಯೋಗಿಸದಂತೆ ಸಮರ್ಪಕ ಹಾಗೂ ಅಗತ್ಯ ಮುಂಜಾಗ್ರತ ಕ್ರಮ ತೆಗೆದುಕೊಂಡ ಬಗ್ಗೆ ಸಾಬೀತುಪಡಿಸಲಾಗಿದೆಯೇ?
3. ಯಾವ ಆದೇಶ

ಈ ಮೇಲಿನ ವಿವಾದಾಂಶಗಳಿಗೆ ಕೆಳಗಿನಂತೆ ಉತ್ತರಿಸುತ್ತೇನೆ.

1. ಸಕಾರಾತ್ಮಕ
2. ನಕರಾತ್ಮಕ
3. ಕೊನೆಯ ಆದೇಶದಂತೆ

**ಕಾರಣಗಳು:**

ಪರಿಶೀಲನಾಂಶ– 1 :– ಸರ್ಕಾರದ ಪರವಾಗಿ ಶ್ರೀ ಎಸ್.ಎನ್ ಶಂಕರನಾರಾಯಣ ಅಬಕಾರಿ ಇನ್ಸ್‌ಪೆಕ್ಟರ್ (ಪ್ರ.ಸ–1) ಮತ್ತು ಶ್ರೀ ಸಿದ್ಧಲಿಂಗಪ್ಪ ಆಗಿನ ಪಿ.ಎಸ್.ಐ (ಪ್ರ.ಸ–2) ಇವರುಗಳನ್ನು ವಿಚಾರಣೆ ಮಾಡಿದೆ. ಆ ಪೈಕಿ ಪ್ರ.ಸ–1 ಇವರ ಶಿವಮೊಗ್ಗ ಜಯನಗರ ಪೊಲೀಸ್ ಠಾಣೆಯ ಕ್ರೈಂ 118/90–91 ಕ್ಕೆ ಸಂಬಂಧಿಸಿದ ದಾಖಲೆ ಪತ್ರ ಹಾಗೂ ಜಪ್ತುಮಾಡಿದ ವಾಹನ ಮತ್ತು 4 ಪೆಟ್ಟಿಗೆ ಬಿಯರನ್ನು ಜಯನಗರ ಪೊಲೀಸರಿಂದ ವರ್ಗಾವಣೆಯಾಗಿ ಬಂದಿದ್ದು ತಮ್ಮ ಕಛೇರಿಯ ಕ್ರೈಂ ಸಂ: 18/90–91 ರ

ಪ್ರಕಾರ ದಿನಾಂಕ:29–05–1991 ರ ಮೊಕದ್ದಮೆಯನ್ನು ದಾಖಲಿಸಿಕೊಂಡಿರುವುದಾಗಿ ಹಾಗೂ ಜಪ್ತು ಮಾಡಿದ ಬಿಯರ್ ಬಾಟಲ್‌ಗಳ ಪೈಕಿ ಮಾದರಿಗಾಗಿ ತೆಗೆದಿದ್ದ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಿಕೊಟ್ಟಿದ್ದು ನಂತರ ಪ್ರಾಧಿಕೃತ ಅಧಿಕಾರಿಗಳಿಗೆ ವಾಹನ ಮುಟ್ಟುಗೋಲಿನ ಬಗ್ಗೆ ವರದಿ ಸಲ್ಲಿಸಿರುವುದಾಗಿ ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿದಾರರಿಗೆ ವಾಹನ ಮಾಲೀಕರ ಪರವಾಗಿ ವಕೀಲರು ಪಾಟೀ ಸವಾಲು ಮಾಡಿರುತ್ತಾರೆ. ಅದರಲ್ಲಿ ಬಿಯರ್ ಬಾಟಲಿಗಳ ಮೇಲೆ ಪ್ರಿಂಟೆಡ್ ಲೇಬಲ್‌ಗಳು ಇರುವುದಿಲ್ಲ. ಪ್ರತಿಯೊಂದು ಸೀಸೆ ಪರಿಶೀಲನೆ ಮಾಡಲಿಲ್ಲ ಹಾಗೂ ಜಪ್ತು ಮಾಡಿದ ಆಟೋ ರಿಕ್ಷಾದಲ್ಲಿ ಯಾವುದೇ ಬಿಯರ್ ಬಾಟಲ್‌ಗಳು ಇರಲಿಲ್ಲ ಎಂಬಾಗಿ ಸೂಚನೆಗಳನ್ನು ಇಟ್ಟಿದ್ದು ಅವುಗಳನ್ನು ಈ ಸಾಕ್ಷಿದಾರರು ಅಲ್ಲಗೆಳೆದಿರುತ್ತಾರೆ.

ಇನ್ನೋರ್ವ ಸಾಕ್ಷಿ ಪ್ರ.ಸ–2 ಮುಖ್ಯ ವಿಚಾರಣೆಯಲ್ಲಿ ಈ ಕೆಳಗಿನಂತೆ ಸಾಕ್ಷಿ ನುಡಿದಿರುತ್ತಾರೆ.

ಮೇ–1991 ರಲ್ಲಿ ಶಿವಮೊಗ್ಗ ಜಯನಗರ ಪೊಲೀಸ್ ಠಾಣೆಯಲ್ಲಿ ಸಬ್ ಇನ್ಸ್‌ಪೆಕ್ಟರಾಗಿ ಕೆಲಸ ಮಾಡುತ್ತಿದ್ದು ದಿನಾಂಕ: 27–05–1991 ರಂದು ಶಿವಮೊಗ್ಗ ಗೋಪಿ ವೃತ್ತದ ಬಳಿ ಮಧ್ಯಾಹ್ನ 12.45 ರ ಸಮಯದಲ್ಲಿ ಗಸ್ತು ಮಾಡುತ್ತಿದ್ದು ಆ ದಿನ ಆ ಸಮಯದಲ್ಲಿ ಸಿಟಿಎಸ್–7629 ಆಟೋ ರಿಕ್ಷಾ ಬರುತ್ತಿದ್ದು ಅದರಲ್ಲಿ ರಟ್ಟಿನ ಪೆಟ್ಟಿಗೆಗಳು ಇದ್ದುದರಿಂದ ಅನುಮಾನ ಬಂದುದರಿಂದ ನಿಲ್ಲಿಸಿ ತಪಾಸಣೆ ಮಾಡಿದೆನು. ಸದರಿ ರಟ್ಟಿನ ಪೆಟ್ಟಿಗೆಗಳಲ್ಲಿ ಕಿಂಗ್ ಫಿಶರ್ ಬಿಯರ್ ಒಂದರಲ್ಲಿ ಯುಬಿ ಬಿಯರ್ 3 ರಲ್ಲಿ ಇತ್ತು. ಆಟೋ ಚಾಲಕ ಶ್ಯಾಮ್ ಎಂಬುವರನ್ನು ವಿಚಾರಿಸಲಾಗಿ ಬಿಲ್ ಮತ್ತು ರಹದಾರಿ ಇಲ್ಲವೆಂದು ತಿಳಿಸಿದನು. ಒಂದೊಂದು ಪೆಟ್ಟಿಗೆಯಲ್ಲಿ 650 x 12 ರಂತೆ ಬಿಯರ್ ಬಾಟಲಿಗಳಿದ್ದವು. ಅನಧಿಕೃತವಾಗಿ ಸಾಗಾಣಿಕೆಯಾಗುತ್ತಿದೆ ಎಂದು ಖಚಿತಪಡಿಸಿಕೊಂಡು ಸ್ಥಳದಲ್ಲಿ ಇಬ್ಬರು ಪಂಚರನ್ನು ಬರಮಾಡಿಕೊಂಡು ಅವರ ಸಮಕ್ಷಮ ಪ್ರತಿಯೊಂದು ಪೆಟ್ಟಿಗೆಯನ್ನು ತಪಾಸಣೆ ಮಾಡಿ ಪ್ರತಿಯೊಂದು ಪೆಟ್ಟಿಗೆಯಿಂದ ತಲಾ ಒಂದರಂತೆ ಸ್ಯಾಂಪಲ್ ತೆಗೆದು ಬಾಯಿ ಸೀಲ್ ಮಾಡಿ ಪಂಚರು ರುಜುಮಾಡಿದ ಬಾಟಲಿಗಳನ್ನು ಅಂಟಿಸಿ 4 ರಟ್ಟಿನ ಪೆಟ್ಟಿಗೆಗಳನ್ನು ಆಟೋ ರಿಕ್ಷಾ ನಂ: 7629 ಅನ್ನು ಅಮಾನತ್ತು ಪಡಿಸಿಕೊಂಡು ಸ್ಥಳದಲ್ಲೇ ಮಹಜರ್ ಮಾಡಿದೆನು. ಆಪಾದಿತನನ್ನು ಠಾಣೆಗೆ ಕರೆದುಕೊಂಡು ಹೋಗಿ ಗುನ್ನೆ ನಂ. 118/91 ರಂತೆ ಗುನ್ನೆ ದಾಖಲು ಮಾಡಿಕೊಂಡು ಆರೋಪಿಯನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿದೆನು. ಸರ್ಕಾರದ ಪರವಾಗಿ ನಾನು ದೂರು ಸಲ್ಲಿಸಿರುತ್ತೇನೆ. ಸ್ಥಳದಲ್ಲಿ ತಯಾರಿಸಿದ ಮಹಜರ್ ಪ್ರತಿಯನ್ನು ಅದು ನಿಶಾನೆ–1 ಇರುತ್ತದೆ. ದೂರಿನ ಪ್ರತಿ ನಿಶಾನೆ–2 ಇರುತ್ತದೆ. ನಂತರ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಮುಂದಿನ ಕ್ರಮ ಕೈಗೊಳ್ಳಲು ಅಬಕಾರಿ ಇಲಾಖೆಗೆ ವರ್ಗಾಯಿಸಿರುತ್ತೇನೆ. ಸಂಬಂಧಪಟ್ಟ ಕಡತ ಮತ್ತು ಮುದ್ದೆಮಾಲನ್ನು ಅಬಕಾರಿ ಇಲಾಖೆಗೆ ವರ್ಗಾಯಿಸಿಕೊಟ್ಟ ಮನವಿ ನಿಶಾನೆ–3 ಅದರ ಮೇಲಿನ ನನ್ನ ರುಜು ಪಿ–3(ಎ) ಇರುತ್ತದೆ.

ಸದರಿ ಸಾಕ್ಷಿದಾರರು ಪಾಟೀ ಸವಾಲಿನಲ್ಲಿ ಈ ಕೆಳಗಿನಂತೆ ಹೇಳಿಕೆ ನೀಡಿದ್ದಾರೆ.

ಆಟೋ ರಿಕ್ಷಾವನ್ನು ಗೋಪಿ ಸರ್ಕಲ್, ಶಿವಮೊಗ್ಗ ಇಲ್ಲಿ ಅಮಾನತ್ತು ಪಡಿಸಿಕೊಂಡೆನು. ಆ ಸರ್ಕಲ್‌ನಲ್ಲಿ ಎರಡು ಸಿನಿಮಾ ಥಿಯೇಟರ್‌ಗಳಿರುವುದು ಸರಿ. ನಾನು ಅಮಾನತ್ತು ಪಡಿಸಿಕೊಂಡ ಆಟೋ ರಿಕ್ಷಾ ನಿಂತಿತ್ತು ಎಂಬುದು ಸರಿಯಲ್ಲ. ಸಿನಿಮಾಗೆ ಬಂದ ಜನರನ್ನು ಅಲ್ಲಿ ಇಳಿಸಲು ಆಟೋ ರಿಕ್ಷಾ ನಿಂತಿತ್ತು ಎಂಬುದು ಸರಿಯಲ್ಲ ಗೋಪಿ ಸರ್ಕಲ್‌ನಲ್ಲಿ ವಾಹನಗಳನ್ನು ನಿಲ್ಲಿಸಿ ಅಮಾನತ್ತು ಪಡಿಸಲು ಅವಕಾಶವಿಲ್ಲವೆನ್ನುವುದು ಸರಿಯಲ್ಲ. ನಾನು ಅಮಾನತ್ತು ಪಡಿಸಿಕೊಂಡ ಮದ್ಯ ಪೆಟ್ಟಿಗೆಗಳ ಮೇಲೆ ಯಾವುದೇ ಲೇಬಲ್ ಇರಲಿಲ್ಲವೆನ್ನುವುದು ಸರಿಯಲ್ಲ ಪೆಟ್ಟಿಗೆಗಳನ್ನ ಒಡೆಯದೇ ಅದರ ಒಳಗೆ ಏನಿದೆ ಎಂಬುದನ್ನು ಹೇಳುವುದು ಸಾಧ್ಯವಿಲ್ಲ ಎಂದು ಹೇಳುವುದು ಸರಿಯಲ್ಲ. ಆಟೋದಲ್ಲಿ ಯಾವುದೇ ಪೆಟ್ಟಿಗೆಗಳು ಇರಲಿಲ್ಲ ಮತ್ತು ಚಿತ್ರಮಂದಿರಕ್ಕೆ ಬಂದ ಜನರನ್ನು ಬಿಡಲು ಆಟೋ ರಿಕ್ಷಾ ನಿಂತಿತ್ತು ಎನ್ನುವುದು ಸರಿಯಲ್ಲ. ನಾನು ಪೆಟ್ಟಿಗೆಯಲ್ಲಿ ಇದ್ದ ಎಲ್ಲಾ ಸೀಸೆಗಳನ್ನು ತೆರೆದು ನೋಡಿರುವುದಿಲ್ಲ. ನಾನು ಅಮಾನತ್ತು ಪಡಿಸಿಕೊಂಡ ಮದ್ಯಕ್ಕೂ ಮತ್ತು ಆಟೋ ರಿಕ್ಷಾಕ್ಕೂ ಯಾವುದೇ ಸಂಬಂಧವಿಲ್ಲವೆನ್ನುವುದು ಸರಿಯಲ್ಲ. ನಾನು ಆಟೋ ಚಾಲಕನ ಮೇಲೆ ಸುಳ್ಳು ಕೇಸು ಹಾಕಿದ್ದೇನೆ ಎಂಬುದು ಸರಿಯಲ್ಲ. ದೂರಿನ ಪ್ರಕಾರ ಆರೋಪಿ ಯಾವುದೇ ಅಪರಾಧ ಮಾಡಿಲ್ಲವೆನ್ನುವುದು ಸರಿಯಲ್ಲ.

ಈ ಸಾಕ್ಷಿದಾರರಿಗೆ ಎದುರುದಾರರ ಪರ ವಕೀಲರು ಪಾರ್ಟಿ ಸವಾಲು ಮಾಡಿದ್ದು ಅದರಲ್ಲಿ ಸದರಿ ಆಟೋ ರಿಕ್ಷಾದಲ್ಲಿ ಸಿನಿಮಾ ನೋಡಲು ಬಂದಿದ್ದ ಜನರನ್ನು ಕರೆದುಕೊಂಡು ಬರಲಾಗಿತ್ತು. ಅವರನ್ನು ಇಳಿಸುವ ಸಲುವಾಗಿ ಗೋಪಿ ಸರ್ಕಲ್‌ನಲ್ಲಿ ನಿಲ್ಲಿಸಲಾಗಿತ್ತು. ಆ ಸಂದರ್ಭದಲ್ಲಿ ಆಟೋವನ್ನು ಹಿಡಿದು ಸುಳ್ಳು ಪ್ರಕರಣ ದಾಖಲು ಮಾಡಿದ್ದಾರೆ ಎಂಬುದನ್ನು ಈ ಸಾಕ್ಷಿದಾರರು ಅಲ್ಲಗೆಳೆದಿರುತ್ತಾರೆ ಹಾಗೂ ಸದರಿ ಆಟೋ ರಿಕ್ಷಾದಲ್ಲಿ ಬಿಯರನ್ನು ಅಕ್ರಮ ಸಾಗಾಟ ಮಾಡಿರುವುದಿಲ್ಲ ಎಂಬುದನ್ನು ಅಲ್ಲಗೆಳೆದಿರುತ್ತಾರೆ.

ಈ ಎರಡು ಸಾಕ್ಷಿದಾರರ ಹೇಳಿಕೆಯನ್ನು ಗಮನಿಸಿದಾಗ ದಿನಾಂಕ:27–05–1991 ರ ಮಧ್ಯಾಹ್ನ 12.45 ರ ಸಮಯದಲ್ಲಿ ಶಿವಮೊಗ್ಗ ಗೋಪಿ ವೃತ್ತದ ಬಳಿ ಸಿಟಿಎಸ್–7629 ನೊಂದಣಿ ಸಂಖ್ಯೆ ಆಟೋ ರಿಕ್ಷಾವನ್ನು 1ನೇ

ಫಿರ್ಯಾದುದಾರರು (ಪ್ರ.ಸ–2) ನಿಲ್ಲಿಸಿ ತಪಾಸಣೆ ಮಾಡಿದಾಗ ಅದರಲ್ಲಿ ಅನಧಿಕೃತವಾಗಿ ರಟ್ಟಿನ ಪೆಟ್ಟಿಗೆಗಳಲ್ಲಿ ಒಟ್ಟು 31.200 ಲೀ ಬಿಯರ್ ತುಂಬಿದ ಬಾಟಲಿಗಳ ಸಾಗಾಟ ಆಗುತ್ತಿತ್ತು ಎಂಬುದು ಖಚಿತವಾಗುತ್ತದೆ. ಈ ಕುರಿತಂತೆ ಸ್ಥಳದಲ್ಲಿ ಪ್ರ.ಸ–2 ರವರು ವಾಹನವನ್ನು ಹಾಗೂ ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ ಬಿಯರ್‌ಗಳನ್ನು ಜಪ್ತು ಮಾಡಿ ಮಹಜರ್ ಮಾಡಿದ ವಿಷಯ ಈ ಸಾಕ್ಷಿದಾರರ ಹೇಳಿಕೆಯಿಂದ ವ್ಯಕ್ತವಾಗುತ್ತದೆ.

ವಾಹನವನ್ನು ಸ್ಥಳದಲ್ಲಿ ಜಪ್ತು ಮಾಡಿದ ಬಗ್ಗೆ ಮಹಜರ್ ನಕಲು, ದೂರಿನ ನಕಲು ಇವುಗಳನ್ನು ನಿಶಾನೆ ಗುರುತು ಪಡಿಸಲಾಗಿದ್ದು ಇವುಗಳು ಮೇಲ್ಕಾಣಿಸಿದ ವಿಷಯಗಳನ್ನು ಪುಷ್ಟೀಕರಿಸುತ್ತವೆ. ಈ ಇಬ್ಬರು ಸಾಕ್ಷಿದಾರರ ಹೇಳಿಕೆಯನ್ನು ನಂಬದೇ ಇರಲು ಯಾವುದೇ ಪ್ರಬಲವಾದ ಕಾರಣಗಳು ಪಾಟೀ ಸವಾಲಿನಲ್ಲಿ ಬಂದಿರುವುದಿಲ್ಲ. ಪ್ರ.ಸ–2 ಇವರು ಕರ್ತವ್ಯ ನಿರತ ಪೊಲೀಸ್ ಅಧಿಕಾರಿಯಾಗಿದ್ದು ಅವರ ಸಾಕ್ಷಿ ಹೇಳಿಕೆಯು ನಂಬಲರ್ಹವಾಗಿರುತ್ತದೆ. ವಾಹನ ಮಾಲೀಕರ ಪರವಾಗಿ ಪ್ರತಿಪಾದಿಸಿದಂತೆ, ಪ್ರ.ಸ.–2 ಇವರು ಸುಳ್ಳು ಪ್ರಕರಣವನ್ನು ದಾಖಲು ಮಾಡಿರುತ್ತಾರೆ ಎಂಬ ವಿಷಯವನ್ನು ನಂಬಲು ಯಾವುದೇ ಆಧಾರ ಇರುವುದಿಲ್ಲ. ಕೇವಲ ಇಲಾಖಾ ಸಾಕ್ಷಿದಾರರ ಹೇಳಿಕೆಯನ್ನು ನಂಬಬಾರದು ಎಂಬ ಬಗ್ಗೆ ಅಡೆತಡೆ ಇರುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಪರಿಶೀಲನಾ ಅಂಶ 1 ನ್ನು ನಾನು ಸಕಾರಾತ್ಮಕವಾಗಿ ಪರಿಗಣಿಸುತ್ತೇನೆ.

ಸ್ವತ: ವಾಹನ ಮಾಲೀಕರಾದ ಶ್ಯಾಮ್ ಇವರು ಈ ಪ್ರಾಧಿಕಾರದ ಮುಂದೆ ಸಾಕ್ಷಿ ಹೇಳಿಕೆಯನ್ನು ನೀಡಿದ್ದು ಅದರಲ್ಲಿ ದಿನಾಂಕ:27–05–1991 ರಂದು ತನ್ನ ಆಟೋ ರಿಕ್ಷಾ ಸಂ: ಸಿಟಿಎಸ್–7629 ರಲ್ಲಿ ಪ್ಯಾಸೆಂಜರ್‌ಗಳನ್ನು ಕರೆದುಕೊಂಡು ಬಂದು ಹೆಚ್.ಪಿ.ಸಿ ಚಿತ್ರಮಂದಿರದ ಹತ್ತಿರ ಅವರನ್ನು ಇಳಿಸುತ್ತಿರುವಾಗ ಪಿಎಸ್ಐ ರವರು ಬಂದು ಏಕೆ ಇಲ್ಲಿ ನಿಲ್ಲಿಸಿದೆ ಎಂದು ಕೇಳಿದಾಗ ತಾನು ಪ್ಯಾಸೆಂಜರ್ ನಿಂದ ಹಣ ಪಡೆಯುತ್ತಿದ್ದೆ ಎಂದು ಹೇಳಿದೆ. ಆದರೆ ಅವರು ಸ್ಟೇಷನ್‌ಗೆ ವಾಹನ ತರಲು ಹೇಳಿದರು ಅದರಂತೆ ನಾನು ತೆಗೆದುಕೊಂಡು ಹೋದೆ ಆಗ ಪಿ.ಎಸ್.ಐ ರವರು ಕೇಸ್ ದಾಖಲು ಮಾಡಿದರು. ಗಾಡಿಯಲ್ಲಿ ಪರ್ಮಿಟ್ ಇಲ್ಲದ ಬಿಯರ್ ಇತ್ತು ಎಂದು ಹೇಳುತ್ತಾರೆ. ಆದರೆ ಅದನ್ನು ನನ್ನಿಂದ ಅಮಾನತ್ತು ಪಡಿಸಿಕೊಂಡಿರುವುದಿಲ್ಲ. ನನ್ನ ಮೇಲೆ ಸುಳ್ಳು ಕೇಸ್ ಹಾಕಿರುತ್ತಾರೆ ಎಂದು ಸಾಕ್ಷಿ ನುಡಿದಿರುತ್ತಾರೆ. ಮಾನ್ಯ ಎಡಿಪಿಯವರು ಪಾಟೀ ಸವಾಲು ಮಾಡಿದ್ದಾರೆ. ಪೊಲೀಸಿನವರು ಸುಳ್ಳು ಪ್ರಕರಣವನ್ನು ಹಾಕಿರುತ್ತಾರೆ ಎಂದು ಆಟೋ ಚಾಲಕರ ಸಂಘದವರಿಗಾಗಲೀ, ಬೇರೆ ಅಧಿಕಾರಿಗಳಿಗಾಗಲೀ ತಾನು ತಿಳಿಸಿಲ್ಲವೆಂದು ಪಾಟೀ ಸವಾಲಿನಲ್ಲಿ ಹೇಳಿಕೆ ನೀಡಿದ್ದಾರೆ.

ವಾಹನ ಮಾಲೀಕರು ತಮ್ಮ ಹೇಳಿಕೆಯಲ್ಲಿ ತಿಳಿಸಿದ ವಿಷಯಗಳನ್ನು ಅವರು ವಾಹನ ಬಿಡುಗಡೆಗಾಗಿ ಸಲ್ಲಿಸಿದ ಅರ್ಜಿಯಲ್ಲಿ ನಮೂದಿಸಿರುವುದಿಲ್ಲ. ಇದೂ ಅಲ್ಲದೆ ಜಪ್ತು ಮಾಡಿದ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ನೀಡಿದ ಕಾರಣ ಕೇಳಿ ನೋಟೀಸ್‌ಗೆ ವಾಹನ ಮಾಲೀಕರು ಉತ್ತರ ನೀಡಿರುವುದಿಲ್ಲ. ಈ ಎಲ್ಲಾ ವಿಷಯವನ್ನು ಗಮನಿಸಿದಾಗ ವಾಹನ ಮಾಲೀಕರು ನೀಡಿದ ಸಾಕ್ಷಿ ಹೇಳಿಕೆಯಲ್ಲಿ ನಂಬಲು ಬರಲಾರದು. ಕೇವಲ ವಾಹನ ಮುಟ್ಟುಗೋಲು ಮಾಡಿಕೊಳ್ಳುವುದನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದ ಈ ರೀತಿ ಕಟ್ಟು ಕತೆಯನ್ನು ಸಾಕ್ಷಿ ಹೇಳಿಕೆಯನ್ನು ನೀಡಿದ್ದು ವ್ಯಕ್ತವಾಗುತ್ತದೆ. ವಾಹನವನ್ನು ಜಪ್ತು ಮಾಡುವ ಸಮಯದಲ್ಲಿ ಸ್ವತ: ವಾಹನ ಮಾಲೀಕರೆ ವಾಹನವನ್ನು ಚಾಲನೆಯನ್ನು ಮಾಡಿಕೊಂಡು ಬರುತ್ತಿದ್ದು ಆ ವಾಹನವನ್ನು ಪರಿಶೀಲಿಸಿದಾಗ ಆ ವಾಹನದಲ್ಲಿ ತೆರಿಗೆ ಕೊಡದ ಸುಮಾರು 31.200 ಲೀ. ಬಿಯರ್ ಇದ್ದವೆಂದು ಪ್ರ.ಸ–2 ರವರು ನಿಖರವಾಗಿ ಸಾಕ್ಷಿ ನುಡಿದಿರುತ್ತಾರೆ. ಘಟನೆಯ ದಿನ ವಾಹನವನ್ನು ತಾನು ಸ್ವತ: ತಾನೇ ಚಾಲನೆಮಾಡಿಕೊಂಡು ಬಂದ ವಿಷಯವನ್ನು ವಾಹನದ ಮಾಲೀಕರು ಒಪ್ಪಿರುತ್ತಾರೆ. ತನ್ನ ವಾಹನದಲ್ಲಿ ಬಿಯರ್‌ಗಳನ್ನು ಸಾಗಾಟ ಮಾಡದಿದ್ದರೂ ಯಾವ ಕಾರಣಕ್ಕಾಗಿ ಸುಳ್ಳು ಪ್ರಕರಣ ಇವರ ವಿರುದ್ಧ ದಾಖಲು ಮಾಡಲಾಗಿದೆ ಎಂಬುದನ್ನ ವಾಹನ ಮಾಲೀಕರು ಸಿದ್ಧಪಡಿಸಿರುವುದಿಲ್ಲ. ಸುಳ್ಳು ಪ್ರಕರಣವನ್ನ ದಾಖಲಿಸಿದ ಬಗ್ಗೆ ಆಟೋ ಚಾಲಕರ ಸಂಘದವರಿಗಾಗಲೀ ಬೇರೆ ಅಧಿಕಾರಿಗಳಲ್ಲಾಗಲೀ ತಾನು ತಿಳಿಸಿಲ್ಲವೆಂದು ವಾಹನ ಮಾಲೀಕರು ತಮ್ಮ ಪಾಟೀ ಸವಾಲಿನಲ್ಲಿ ಒಪ್ಪಿಕೊಂಡಿರುತ್ತಾರೆ.

ಈ ಎಲ್ಲಾ ವಿಷಯಗಳನ್ನು ಗಮನಿಸಿದಾಗ ಈ ಪ್ರಕರಣದಲ್ಲಿ ಜಪ್ತುಪಡಿಸಿದ ಆಟೋ ರಿಕ್ಷಾ ಸಂ: ಸಿಟಿಎಸ್–7629 ರಲ್ಲಿ ಅಕ್ರಮವಾಗಿ 31.200 ಲೀ. ಬಿಯರನ್ನ ಸಾಗಾಟ ಮಾಡಲಾಗಿತ್ತು ಹಾಗೂ ಸ್ವತ: ವಾಹನದ ಮಾಲೀಕರು ಅವರ ತಿಳುವಳಿಕೆಯಿಂದಲೇ ಈ ರೀತಿ ಅಕ್ರಮವಾಗಿ ಬಿಯರ್‌ಗಳನ್ನ ಸದರಿ ವಾಹನದಲ್ಲಿ ತುಂಬಿಕೊಂಡು ಅವರೇ ಚಾಲನೆ ಮಾಡುತ್ತಿದ್ದ ವಿಷಯ ಯಾವುದೇ ಸಂಶಯಕ್ಕೆ ಎಡೆ ಇಲ್ಲದಂತೆ ಸಾಬೀತಾಗಿದೆ, ಎಂಬುವ ತೀರ್ಮಾನಕ್ಕೆ ಬರಬೇಕಾಗಿರುತ್ತದೆ. ಕಾರಣ ಪರಿಶೀಲನಾ ಅಂಶ ಎರಡನ್ನು ನಕರಾತ್ಮಕವಾಗಿ ಪರಿಗಣಿಸುತ್ತೇನೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ**

ಶ್ರೀ ಜೆ. ಕೃಷ್ಣ, ಪ್ರಾಧೀಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಅಬಕಾರಿ ಕಾಯಿದೆ ಕಲಂ 43(ಎ) ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕಲ0 43(ಬಿ)(1)

ಅನ್ವಯ ಮುಟ್ಟುಗೋಲು ಹಾಕಿಕೊಳ್ಳುವ ಪೂರ್ವದಲ್ಲಿ ಅನುಸರಿಸಬೇಕಾದ ನಿಯಮಗಳನ್ನು ಅನುಸರಿಸಿದ ನಂತರ; 1ನೇ ಫಿರ್ಯಾದುದಾರರು ತಮ್ಮ ಗುನ್ನೆ ಸಂಖ್ಯೆ: 118/1991 ದಿನಾಂಕ:27–05–1991 ರಲ್ಲಿ ಜಪ್ತುಪಡಿಸಿಕೊಂಡ ಆನಂತರ ಫಿರ್ಯಾದುದಾರರು–2 ಆದ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಶಿವಮೊಗ್ಗ ನಂ.1 ಉಪವಲಯ ರವರಿಗೆ ಹಸ್ತಾಂತರಿಸಿರುವ ವಾಹನ ಆಟೋರಿಕ್ಷಾ ಸಂ: ಸಿಟಿಎಸ್–7629 ವನ್ನು ಈ ಪ್ರಾಧಿಕಾರದ ಸಮಸಂಖ್ಯೆ ಆದೇಶ ದಿನಾಂಕ:30–5–1991 ರಲ್ಲಿ ತಾತ್ಕಾಲಿಕವಾಗಿ ಬಿಡುಗಡೆಗೊಳಿಸಲಾಗಿದ್ದ ಆದೇಶವನ್ನು ಹಿಂತೆಗೆದುಕೊಂಡಿರುತ್ತೇನೆ. ಈ ಪ್ರಕರಣದಲ್ಲಿ ಜಪ್ತು ಮಾಡಲಾಗಿದ್ದ 31.200 ಲೀಟರ್ ಬಿಯರ್ ಪೈಕಿ ರಾಸಾಯನಿಕ ಪರೀಕ್ಷೆಗೆ ತೆಗೆದು ಉಳಿದ ಬಿಯರ್‌ನ್ನು ಮತ್ತು ವಾಹನ ಆಟೋ ರಿಕ್ಷಾ ಸಂ: ಸಿಟಿಎಸ್–7629 ಅನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ಸದರಿ ಬಿಯರ್‌ನ್ನು ಅಬಕಾರಿ ಉಪ ಅಧೀಕ್ಷಕರು, ಶಿವಮೊಗ್ಗ ಉಪ ವಿಭಾಗ ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿದೆ.

ಕ್ಲೇಮ್‌ದಾರರು 15 ದಿನದೊಳಗಾಗಿ ತಾತ್ಕಾಲಿಕವಾಗಿ ಬಿಡುಗಡೆಯಾದ ವಾಹನವನ್ನು ಅಬಕಾರಿ ಇನ್ಸ್‌ಪೆಕ್ಟರ್, ಶಿವಮೊಗ್ಗ ವಲಯ ನಂ.1 ಇವರಿಗೆ ಒಪ್ಪಿಸತಕ್ಕದ್ದು ತಪ್ಪಿದ್ದಲ್ಲಿ ಕ್ಲೇಮ್‌ದಾರರ ಪರವಾಗಿ ಜಾಮೀನುದಾರರು ನೀಡಿದ್ದ ರೂ. 20,000/– ಮೊತ್ತದ ಇಂಡೆಂನಿಟಿ ಬಾಂಡ್ ಹಾಗೂ ಅದೇ ಮೊತ್ತದ ಭದ್ರತೆಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಈ ಆದೇಶವನ್ನು ದಿನಾಂಕ:30–12–2009 ರ0ದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

1) ಪ್ರ.ಸ–1 – ಎಸ್.ಎನ್. ಶಂಕರನಾರಾಯಣ
ಅಬಕಾರಿ ಇನ್ಸ್‌ಪೆಕ್ಟರ್,
ಹೆಚ್.ಇ. ಡಿಸ್ಟಿಲ್ಲರಿ, ಶಿವಮೊಗ್ಗ.

2) ಪ್ರ.ಸ–2 – ಶ್ರೀ ಸಿದ್ಧಲಿಂಗಪ್ಪ
ಪೋಲೀಸ್ ಸಬ್ ಇನ್ಸಪೆಕ್ಟರ್,
ಕೋಟೆ ಪೋಲೀಸ್ ಠಾಣೆ, ಶಿವಮೊಗ್ಗ.

**ಅನುಬಂಧ–2**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳ ವಿವರ

1) ನಿಶಾನೆ ಪಿ–1 – ಮಹಜರ್
2) ನಿಶಾನೆ ಪಿ–2 – ಪ್ರಥಮ ವರ್ತಮಾನ ವರದಿ
3) ನಿಶಾನೆ ಪಿ–3 – ಅಮಾನತ್ತು ವರದಿ

**ಅನುಬಂಧ–3**

ಫಿರ್ಯಾದುದಾರರ ಪರ ಮಂಡಿಸಲಾದ ಮುದ್ದೆಮಾಲುಗಳ ವಿವರ

1)ಎಂ.ಒ–1 – ವಾಹನ ಆಟೋರಿಕ್ಷಾ ಸಂ: ಸಿಟಿಎಸ್–7629
2)ಎಂ.ಒ–2 – ಸ್ಯಾ0ಪಲ್ ಬಾಟಲಿ

**ಅನುಬಂಧ–4**

ಅರ್ಜಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

1) ಡಿ ಡಬ್ಲೂ–1 – ಶಾಮ್ ಬಿನ್ ರಾಮಪ್ಪ ಆಟೋಚಾಲಕ,
ಮನೆ ನಂ:26 2ನೇ ಕ್ರಾಸ್
ಅಶೋಕನಗರ ಶಿವಮೊಗ್ಗ

**ಅನುಬಧ–5**

ಅರ್ಜಿದಾರರ ಪರ ಮಂಡಿಸಲಾದ ದಾಖಲಾತಿಗಳ ವಿವರ

–– ಇಲ್ಲಾ – –

**ಅನುಬಧ–6**

ಅರ್ಜಿದಾರರ ಪರ ಮ0ಡಿಸಲಾದ ಮುದ್ದೆಮಾಲುಗಳ ವಿವರ

–– ಇಲ್ಲಾ – –

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.220

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕರಣದ ಸಂಖ್ಯೆ : ಇಎಕ್ಸ್‌ಇ/ಡಿಟಿಸಿಆರ್/105/2008–09**

**ಫಿರ್ಯಾದುದಾರರು :**
ಅಬಕಾರಿ ಸಬ್ ಇನ್ಸ್‌ಪೆಕ್ಟರ್
ಸಾಗರ ವಲಯ.
ಪ್ರ.ಮಾ.ವ ಸಂಖ್ಯೆ: 08/2008–09
ದಿನಾಂಕ: 24–09–2008.

**ಆರೋಪಿ :**
ಪತ್ತೆಯಾಗಿರುವುದಿಲ್ಲ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:24–09–2008 ರಂದು ಫಿರ್ಯಾದುದಾರರು ಸುಮಾರು ಸಂಜೆ 7.30 ಗಂಟೆ ಸಮಯದಲ್ಲಿ ಸಾಗರ ತಾಲ್ಲೂಕು ಬೆಳಂದೂರಿನಿಂದ ದೊಡ್ಡ ಬ್ಯಾಣಕ್ಕೆ ಹೋಗುವ ರಸ್ತೆಯ ತಿರುವಿನಲ್ಲಿ ಅಬಕಾರಿ ದಾಳಿ ನಡೆಸಿದಾಗ ವಾಹನ ಟಿವಿಎಸ್ ಇಂಡು ಸುಜುಕಿ ಸಂಖ್ಯೆ: ಕೆಎ–15–ಇ–967 ರಲ್ಲಿ ಅಕ್ರಮವಾಗಿ 15 ಲೀ. ಕಳ್ಳಭಟ್ಟಿ ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆಮಾಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14(2) ರಂತೆ ಅಪರಾಧವೆಂದು ಇದೇ ಕಾಯಿದೆ ಕಲಂ 32, 34 ರ ರೀತ್ಯಾ ಶಿಕ್ಷಾರ್ಹವೆಂದು ಫಿರ್ಯಾದುದಾರರು ಪ್ರ.ಮಾ.ವ ಸಂಖ್ಯೆ: 08/2008–09 ದಿನಾಂಕ:24–09–2008 ರಂದು ಮೊಕದ್ದಮೆಯನ್ನು ದಾಖಲಿಸಿ ಮುದ್ದೆಮಾಲನ್ನು ವಶಪಡಿಸಿಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸದಲಾದ ವಾಹನ ಟಿವಿಎಸ್ ಇಂಡು ಸುಜುಕಿ ಸಂಖ್ಯೆ: ಕೆಎ–15–ಇ–967 ರ ನೊಂದಾಯಿತ ಮಾಲೀಕರು ತಾನ್ಯ ನಾಯ್ಕ ಬಿನ್ ಚೌಕ, ತ್ಯಾಗರ್ತಿ ಪೋಸ್ಟ್, ಸಾಗರ ತಾಲ್ಲೂಕು ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಸಾಗರ ರವರು ನೀಡಿದ ಬಿ ಎಕ್ಸ್‌ಟ್ರಾಕ್ಟ್ ವರದಿಯಂತೆ ಕಂಡು ಬರುತ್ತದೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕಡತದಲ್ಲಿ ಕೆಳಕಂಡ ದಾಖಲಾತಿಗಳು ಕಂಡುಬರುತ್ತವೆ.

1. ಪ್ರಥಮ ಮಾಹಿತಿ ವರದಿ
2. ಪಂಚನಾಮೆ
3. ರಾಸಾಯನಿಕ ವಿಶ್ಲೇಷಣಾ ವರದಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ಅಬಕಾರಿ ಕಾಯಿದೆ ಕಲಂ 32, 34 ಹಾಗೂ 38 ಎ ರ ಉಲ್ಲಂಘನೆ ಕಂಡು ಬಂದಿರುವುದರಿಂದ ಈ ಪ್ರಕರಣದ ವಾಹನ ಮಾಲೀಕರಾದ ತಾನ್ಯ ನಾಯ್ಕ ಬಿನ್ ಚೌಕ, ತ್ಯಾಗರ್ತಿ ಪೋಸ್ಟ್, ಸಾಗರ ತಾಲ್ಲೂಕು ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೊಂದಾಯಿತ ಅಂಚೆ ಮುಖಾಂತರ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಆದರೆ ಸದರಿ ನೋಟೀಸು ಸ್ವೀಕೃತಗೊಳ್ಳದೇ ಅಂಚೆ ಲಕೋಟೆಯು ಹಿಂದಿರುಗಿರುತ್ತದೆ.

ಎಡಿಪಿಯವರು ಪ್ರಕರಣದ ಕಡತ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ತಮ್ಮ ವಾದವನ್ನು ಮಂಡಿಸಿದ್ದಾರೆ. ಪರವಾನಿಗೆ ಇಲ್ಲದೇ 15 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ವಾಹನ ಟಿವಿಎಸ್ ಇಂಡು ಸುಜುಕಿ ಸಂಖ್ಯೆ: ಕೆಎ–15–ಇ–967 ರಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿರುವಾಗ ಜಪ್ತು ಮಾಡಲಾಯಿತು. ರಾಸಾಯನಿಕ ತಜ್ಞರು ಜಪ್ತುಪಡಿಸಿದ ಮುದ್ದೆಮಾಲನ್ನು ಪರಿಶೀಲಿಸಿ ಅಬಕಾರಿ ಪದಾರ್ಥವಾಗಿರುವುದು ದೃಢಪಡಿಸಿರುತ್ತಾರೆ. ಕರ್ನಾಟಕ ಅಬಕಾರಿ ಕಾಯಿದೆ 1965 ರ

ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಸದ್ರಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ನೋಟೀಸ್ ನೀಡಲಾಗಿದ್ದು, ಸದರಿ ನೋಟೀಸು ವಾಹನ ಮಾಲೀಕರಿಗೆ ಸ್ವೀಕೃತವಾಗದೆ ಅಂಚೆ ಲಕೋಟೆ ಹಿಂದಿರುಗಿರುತ್ತದೆ. ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಅಬಕಾರಿ ಕಾಯಿದೆ ಉಲ್ಲಂಘನೆಯಾಗಿರುವುದು ಸ್ಪಷ್ಟವಾಗುತ್ತದೆ. ಪ್ರಮುಖವಾಗಿ ವಾಹನದ ಮಾಲೀಕರು ಈ ಪ್ರಕರಣದಲ್ಲಿ ತಾವು ಶಾಮೀಲಾಗಿಲ್ಲವೆಂಬ ಬಗ್ಗೆ, ತಮಗೆ ಪ್ರಕರಣದ ತಿಳುವಳಿಕೆ ಇರುವುದಿಲ್ಲ ಎಂಬ ಬಗ್ಗೆ ಮತ್ತು ಈ ಪ್ರಕರಣ ನಡೆಯದಂತೆ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿರುವ ಬಗ್ಗೆ ಈ ಪ್ರಾಧಿಕಾರಕ್ಕೆ ಯಾವುದೇ ಪುರಾವೆಗಳನ್ನು ಒದಗಿಸಿರುವುದಿಲ್ಲ ಹಾಗೂ ತೃಪ್ತಿಕರವಾಗಿ ಸಾಬೀತುಪಡಿಸಿರುವುದಿಲ್ಲ. ಸದ್ರಿ ಕಾಯಿದೆಯ ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಈ ಜವಾಬ್ದಾರಿ ಇರುತ್ತದೆ. ಅಲ್ಲದೆ ಕಲಂ 40 ರಂತೆ ಕರ್ನಾಟಕ ಅಬಕಾರಿ ಕಾಯಿದೆ ಉಲ್ಲಂಘನೆ ಆಗಿಲ್ಲವೆಂಬ ಬಗ್ಗೆ ವಾಹನದ ಮಾಲೀಕರು ಸಾಬೀತುಪಡಿಸದಿದ್ದಲ್ಲಿ, ವಾಹನದ ಮಾಲೀಕರು ಅಬಕಾರಿ ಕಾಯಿದೆ ಉಲ್ಲಂಘನೆ ಮಾಡಿದ್ದಾರೆಂದು ಭಾವಿಸಬಹುದಾಗಿರುವುದರಿಂದ ಈ ಪ್ರಕರಣವನ್ನು ಕಲಂ 43 (ಸಿ) ಅಡಿ ವಿಲೇಗೊಳಿಸಿ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದ ಕಡತ, ದಾಖಲಾತಿಗಳನ್ನು, ಎಡಿಪಿಯವರ ವಾದವನ್ನು ಹಾಗೂ ಅಬಕಾರಿ ಕಾಯಿದೆಯ ಕಲಂಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನವನ್ನು 1 ವರ್ಷ 3 ತಿಂಗಳು ಕಳೆದರೂ ಇದುವರೆಗೆ ಯಾರೂ ಕ್ಲೇಮು ಮಾಡಿರುವುದಿಲ್ಲ. ವಾಹನ ಮಾಲೀಕರಿಗೆ ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ಕಾರಣ ಕೇಳಿ ನೋಟೀಸ್ ಕಳುಹಿಸಲಾಗಿತ್ತು. ಆದರೆ ನೋಟೀಸು ಜಾರಿಗೊಳ್ಳದೇ ಅಂಚೆ ಲಕೋಟೆಯು ಹಿಂದಿರುಗಿರುತ್ತದೆ. ಅಂದರೆ ತಮ್ಮ ಜವಾಬ್ದಾರಿಯನ್ನು ವಾಹನದ ಮಾಲೀಕರು ನಿಭಾಯಿಸಿರುವುದಿಲ್ಲ. ಕಲಂ 40 ರ ಅಡಿಯಲ್ಲಿ ಇರುವ **"ಪ್ರಿಸಂಷನ್"** ವಾಹನದ ಮಾಲೀಕರಿಗೆ ಪ್ರತಿಕೂಲವಾಗಿದ್ದು, ನಿರಪರಾಧಿಗಳೆಂದು ಸಾಬೀತು ಪಡೆಸುವ ಜವಾಬ್ದಾರಿ ಸಹ ವಾಹನದ ಮಾಲೀಕರ ಮೇಲೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಮಾನ್ಯ ಎಡಿಪಿಯವರ ವಾದಕ್ಕೆ ಮನ್ನಣೆ ದೊರೆಯಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ/ಡಿಟಿಸಿಆರ್/105/2008–09, ದಿನಾಂಕ:24ನೇ ಡಿಸೆಂಬರ್, 2009**

ಪ್ರಕರಣದಲ್ಲಿ ತಿಳಿಸಿದ ಎಲ್ಲಾ ವಿವರಗಳನ್ನು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ನಲ್ಲಿ ದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಜೆ. ಕೃಷ್ಣ ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಈ ಮೊಕದ್ದಮೆಯಲ್ಲಿ ಇಲಾಖೆಗೆ ವಶಪಡಿಸಿಕೊಂಡಿರುವ ವಾಹನ ಟಿವಿಎಸ್ ಇಂಡು ಸುಜುಕಿ ಸಂಖ್ಯೆ: ಕೆಎ–15–ಇ–967 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಈ ಪ್ರಾಧಿಕಾರದ ಸಮ ಸಂಖ್ಯೆಯ ನಡವಳಿ ದಿನಾಂಕ:11–03–2009 ರ ಆದೇಶವನ್ನು ಪುರಸ್ಕರಿಸಿದೆ.

ಈ ಆದೇಶವನ್ನು ದಿನಾಂಕ:24–12–2009 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.203

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕರಣದ ಸಂಖ್ಯೆ : ಇಎಕ್ಸ್‌ಇ/ಡಿಟಿಸಿಆರ್/122/2008–09**

**ಫಿರ್ಯಾದುದಾರರು :**
ಅಬಕಾರಿ ಸಬ್ ಇನ್ಸ್‌ಪೆಕ್ಟರ್
ಸಾಗರ ವಲಯ.

**ಆರೋಪಿ :**
ದಯಾನಂದ ಬಿನ್ ಪಕೀರಪ್ಪ
ಚಂದ್ರಗುತ್ತಿ ಹೋಬಳಿ, ಸೊರಬ ತಾ॥.

ಪ್ರ.ಮಾ.ವ ಸಂಖ್ಯೆ: 12/2008–09
ದಿನಾಂಕ: 06–10–2008.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:06–10–2008 ರಂದು ಫಿರ್ಯಾದುದಾರರು ಸುಮಾರು ರಾತ್ರಿ 9.30 ಗಂಟೆ ಸಮಯದಲ್ಲಿ ಸಾಗರ ತಾಲ್ಲೂಕಿನ ಯಲಕುಂದ್ಲಿ ಗ್ರಾಮದಿಂದ ತಟ್ಟಿಕೆರೆಗೆ ಹೋಗುವ ರಸ್ತೆಯ ಮಾವಿನ ಹೊಳೆಯ ಸೇತುವೆಯ ಹತ್ತಿರ ಅಬಕಾರಿ ದಾಳಿ ನಡೆಸಿದಾಗ ವಾಹನ ಟಿವಿಎಸ್ ಸುಜುಕಿ ಮ್ಯಾಕ್ಸ್–100 ಸಂ: ಕೆಎ–15–ಇ–4763 ರಲ್ಲಿ 25 ಲೀ. ಕಳ್ಳಭಟ್ಟಿ

ಸಾರಾಯಿಯನ್ನು ಅಕ್ರಮವಾಗಿ ಹೊಂದಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆಮಾಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14(2) ರಂತೆ ಅಪರಾಧವೆಂದು ಇದೇ ಕಾಯಿದೆ ಕಲಂ 32, 34 ರ ರೀತ್ಯಾ ಶಿಕ್ಷಾರ್ಹವೆಂದು ಫಿರ್ಯಾದುದಾರರು ಪ್ರ.ಮಾ.ವ ಸಂಖ್ಯೆ: 12/2008–09 ದಿನಾಂಕ:06–10–2008 ರಂದು ಮೊಕದ್ದಮೆಯನ್ನು ದಾಖಲಿಸಿ ಮುದ್ದೆಮಾಲನ್ನು ವಶಪಡಿಸಿಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಲಾದ ವಾಹನ ಟಿವಿಎಸ್ ಸುಜುಕಿ ಮ್ಯಾಕ್ಸ್–100 ಸಂ:ಕೆಎ–15–ಇ–4763 ರ ನೊಂದಾಯಿತ ಮಾಲೀಕರು ಕೆ. ಯುವರಾಜ ಬಿನ್ ಬಸವರಾಜಪ್ಪ, ಕುಪ್ಪಗದ್ದೆ ಪೋಸ್ಟ್, ಸೊರಬ ತಾಲ್ಲೂಕು ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಸಾಗರ ರವರು ನೀಡಿದ ಬಿ ಎಕ್ಸ್‌ಟ್ರಾಕ್ಟ್ ವರದಿಯಂತೆ ಕಂಡು ಬರುತ್ತದೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕಡತದಲ್ಲಿ ಕೆಳಕಂಡ ದಾಖಲಾತಿಗಳು ಕಂಡುಬರುತ್ತವೆ.

1. ಪ್ರಥಮ ಮಾಹಿತಿ ವರದಿ
2. ಪಂಚನಾಮೆ
3. ರಾಸಾಯನಿಕ ವಿಶ್ಲೇಷಣಾ ವರದಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ಅಬಕಾರಿ ಕಾಯಿದೆ ಕಲಂ 32, 34 ಹಾಗೂ 38 [ಎ] ರ ಉಲ್ಲಂಘನೆ ಕಂಡು ಬಂದಿರುವುದರಿಂದ ಈ ಪ್ರಕರಣದ ವಾಹನ ಮಾಲೀಕರಾದ ಕೆ. ಯುವರಾಜ ಬಿನ್ ಬಸವರಾಜಪ್ಪ, ಕುಪ್ಪಗದ್ದೆ ಪೋಸ್ಟ್, ಸೊರಬ ತಾಲ್ಲೂಕು ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೊಂದಾಯಿತ ಅಂಚೆ ಮುಖಾಂತರ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಆದರೆ ಸದರಿ ನೋಟೀಸು ಸ್ವೀಕೃತಗೊಳ್ಳದೇ ಅಂಚೆ ಲಕೋಟೆಯು ಹಿಂದಿರುಗಿರುತ್ತದೆ ಮತ್ತು ಪ್ರಕರಣದಲ್ಲಿನ ಆರೋಪಿಗೆ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೊಂದಾಯಿತ ಅಂಚೆ ಮುಖಾಂತರ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಸದರಿ ನೋಟೀಸನ್ನು ಆರೋಪಿಯು ಪಡೆದು ತನ್ನ ಉತ್ತರದಲ್ಲಿ ಪ್ರಕರಣದಲ್ಲಿನ ಅಪರಾಧಕ್ಕೂ ತನಗೂ ಯಾವುದೇ ಸಂಬಂಧ ಇರುವುದಿಲ್ಲ ಮತ್ತು ಪ್ರಕರಣದಲ್ಲಿ ವಶಪಡಿಸಿಕೊಂಡ ಮುದ್ದೆಮಾಲು ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನ್ನ ಅಭ್ಯಂತರ ಏನೂ ಇರುವುದಿಲ್ಲವೆಂದು ತಿಳಿಸಿರುತ್ತಾರೆ.

ಎಡಿಪಿಯವರು ಪ್ರಕರಣದ ಕಡತ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ತಮ್ಮ ವಾದವನ್ನು ಮಂಡಿಸಿದ್ದಾರೆ. ಪರವಾನಿಗೆ ಇಲ್ಲದೇ 25 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ಟಿವಿಎಸ್ ಸುಜುಕಿ ಮ್ಯಾಕ್ಸ್–100 ಸಂಖ್ಯೆ: ಕೆಎ–15–ಇ–4763 ರಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿರುವಾಗ ಜಪ್ತು ಮಾಡಲಾಯಿತು. ರಾಸಾಯನಿಕ ತಜ್ಞರು ಜಪ್ತುಪಡಿಸಿದ ಮುದ್ದೆಮಾಲನ್ನು ಪರಿಶೀಲಿಸಿ ಅಬಕಾರಿ ಪದಾರ್ಥವಾಗಿರುವುದು ದೃಢಪಡಿಸಿರುತ್ತಾರೆ. ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಅಬಕಾರಿ ಕಾಯಿದೆ ಉಲ್ಲಂಘನೆಯಾಗಿರುವುದು ಸ್ಪಷ್ಟವಾಗುತ್ತದೆ. ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಸದ್ರಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ನೋಟೀಸ್ ನೀಡಲಾಗಿದ್ದು, ಸದರಿ ನೋಟೀಸು ವಾಹನ ಮಾಲೀಕರಿಗೆ ಸ್ವೀಕೃತವಾಗದೆ ಅಂಚೆ ಲಕೋಟೆ ಹಿಂದಿರುಗಿರುತ್ತದೆ. ಪ್ರಮುಖವಾಗಿ ವಾಹನದ ಮಾಲೀಕರು ಈ ಪ್ರಕರಣದಲ್ಲಿ ತಾವು ಶಾಮೀಲಾಗಿಲ್ಲವೆಂಬ ಬಗ್ಗೆ, ತಮಗೆ ಪ್ರಕರಣದ ತಿಳುವಳಿಕೆ ಇರುವುದಿಲ್ಲ ಎಂಬ ಬಗ್ಗೆ ಮತ್ತು ಈ ಪ್ರಕರಣ ನಡೆಯದಂತೆ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿರುವ ಬಗ್ಗೆ ಈ ಪ್ರಾಧಿಕಾರಕ್ಕೆ ಯಾವುದೇ ಪುರಾವೆಗಳನ್ನು ಒದಗಿಸಿರುವುದಿಲ್ಲ ಹಾಗೂ ತೃಪ್ತಿಕರವಾಗಿ ಸಾಬೀತುಪಡಿಸಿರುವುದಿಲ್ಲ. ಸದ್ರಿ ಕಾಯಿದೆಯ ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಈ ಜವಾಬ್ದಾರಿ ಇರುತ್ತದೆ. ಅಲ್ಲದೆ ಕಲಂ 40 ರಂತೆ ಕರ್ನಾಟಕ ಅಬಕಾರಿ ಕಾಯಿದೆ ಉಲ್ಲಂಘನೆ ಆಗಿಲ್ಲವೆಂಬ ಬಗ್ಗೆ ವಾಹನದ ಮಾಲೀಕರು ಸಾಬೀತುಪಡಿಸದಿದ್ದಲ್ಲಿ, ವಾಹನದ ಮಾಲೀಕರು ಅಬಕಾರಿ ಕಾಯಿದೆ ಉಲ್ಲಂಘನೆ ಮಾಡಿದ್ದಾರೆಂದು ಭಾವಿಸಬಹುದಾಗಿರುವುದರಿಂದ ಈ ಪ್ರಕರಣವನ್ನು ಕಲಂ 4 (ಸಿ) ಅಡಿ ವಿಲೇಗೊಳಿಸಿ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದ ಕಡತ, ದಾಖಲಾತಿಗಳನ್ನು, ಎಡಿಪಿಯವರ ವಾದವನ್ನು ಹಾಗೂ ಅಬಕಾರಿ ಕಾಯಿದೆಯ ಕಲಂಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನವನ್ನು 1 ವರ್ಷ 2 ತಿಂಗಳು ಕಳೆದರೂ ಇದುವರೆಗೆ ಯಾರೂ ಕ್ಲೇಮು ಮಾಡಿರುವುದಿಲ್ಲ. ವಾಹನ ಮಾಲೀಕರಿಗೆ ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ಕಾರಣ ಕೇಳಿ ನೋಟೀಸ್ ಕಳುಹಿಸಲಾಗಿತ್ತು. ಆದರೆ ನೋಟೀಸು ಜಾರಿಗೊಳ್ಳದೇ ಅಂಚೆ ಲಕೋಟೆಯು ಹಿಂದಿರುಗಿರುತ್ತದೆ. ಅಂದರೆ ತಮ್ಮ ಜವಾಬ್ದಾರಿಯನ್ನು ವಾಹನದ ಮಾಲೀಕರು ನಿಭಾಯಿಸಿರುವುದಿಲ್ಲ. ಕಲಂ 40 ರ ಅಡಿಯಲ್ಲಿ ಇರುವ “ಪ್ರಿಸಂಷನ್” ವಾಹನದ

ಮಾಲೀಕರಿಗೆ ಪ್ರತಿಕೂಲವಾಗಿದ್ದು, ನಿರಪರಾಧಿಗಳೆಂದು ಸಾಬೀತು ಪಡೆಸುವ ಜವಾಬ್ದಾರಿ ಸಹ ವಾಹನದ ಮಾಲೀಕರ ಮೇಲೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಮಾನ್ಯ ಎಡಿಪಿಯವರ ವಾದಕ್ಕೆ ಮನ್ನಣೆ ದೊರೆಯಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ/ಡಿಟಿಸಿಆರ್/122/ 2008-09 ದಿನಾಂಕ:24ನೇ ಡಿಸೆಂಬರ್, 2009**

ಪ್ರಕರಣದಲ್ಲಿ ತಿಳಿಸಿದ ಎಲ್ಲಾ ವಿವರಗಳನ್ನು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ನಲ್ಲಿ ದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಜೆ. ಕೃಷ್ಣ ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಈ ಮೊಕದ್ದಮೆಯಲ್ಲಿ ಇಲಾಖೆಗೆ ವಶಪಡಿಸಿಕೊಂಡಿರುವ ವಾಹನ ಟಿವಿಎಸ್ ಸುಜುಕಿ ಮ್ಯಾಕ್ಸ್-100 ಸಂಖ್ಯೆ:ಕೆಎ-15-ಇ-4763 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಈ ಪ್ರಾಧಿಕಾರದ ಸಮ ಸಂಖ್ಯೆಯ ನಡವಳಿ ದಿನಾಂಕ: 06-03-2009 ರ ಆದೇಶವನ್ನು ಪುರಸ್ಕರಿಸಿದೆ.

ಈ ಆದೇಶವನ್ನು ದಿನಾಂಕ:24-12-2009 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.198

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕರಣದ ಸಂಖ್ಯೆ : ಇಎಕ್ಸ್‌ಇ/ಡಿಟಿಸಿಆರ್/309/2005-06**

**ಫಿರ್ಯಾದುದಾರರು :**
ಅಬಕಾರಿ ಸಬ್ ಇನ್ಸ್‌ಪೆಕ್ಟರ್
ಜಾರಿ ಮತ್ತು ತನಿಖೆ, ಸಾಗರ ತಾಲ್ಲೂಕು
ಪ್ರ.ಮಾ.ವ. ಸಂಖ್ಯೆ: 23/2005-06
ದಿನಾಂಕ: 10-04-2006.

**ಆರೋಪಿ :**
1) ದೇವರಾಯ ಬಿನ್ ಕರಿಯಪ್ಪ
ಕೌಶಿ ಗ್ರಾಮ, ಸಾಗರ ತಾ॥.
2) ಬೀರಪ್ಪ ಬಿನ್ ಮಂಜಪ್ಪ
ಕೌಶಿ ಗ್ರಾಮ, ಸಾಗರ ತಾ॥

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:10-04-2006 ರಂದು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸಾಗರ ತಾಲ್ಲೂಕು ಇವರು ಸಾಗರ ತಾಲ್ಲೂಕು ಭೀಮನೇರಿ ಗ್ರಾಮದ ಬಸ್ ನಿಲ್ದಾಣದ ಹತ್ತಿರ ಅಕ್ರಮವಾಗಿ 20 ಲೀ. ಕಳ್ಳಭಟ್ಟಿ ಸಾರಾಯಿಯನ್ನು ವಾಹನ ಬಜಾಜ್ ಎಂ-80 ಸಂಖ್ಯೆ: ಕೆಎ-31-ಹೆಚ್-8755 ರಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿದ್ದಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 13, 14(2) ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆ ಕಲಂ 32, 34, 38(ಎ) ರ ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ ಪ್ರ.ಮಾ.ವ ಸಂಖ್ಯೆ: 23/2005-06 ದಿನಾಂಕ:10-04-2006 ರಂದು ಮೊಕದ್ದಮೆಯನ್ನು ದಾಖಲಿಸಿ ಮುದ್ದೆಮಾಲನ್ನು ವಶಪಡಿಸಿಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಲಾದ ವಾಹನ ಬಜಾಜ್ ಎಂ-80 ಸಂಖ್ಯೆ:ಕೆಎ-31-ಹೆಚ್-8755 ರ ನೊಂದಾಯಿತ ಮಾಲೀಕರು ಮೋಹನ್ ರಾಮಾನಾಯ್ಕ, ಹಲದಕಟ್ಟ, ಕೂಡ್ಲಿ ಸಿದ್ದಾಪುರ, ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿರಸಿ ರವರು ನೀಡಿದ ಬಿ ಎಕ್ಸ್‌ಟ್ರಾಕ್ಟ್ ವರದಿಯಂತೆ ಕಂಡು ಬರುತ್ತದೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕಡತದಲ್ಲಿ ಕೆಳಕಂಡ ದಾಖಲಾತಿಗಳು ಕಂಡುಬರುತ್ತವೆ.

1. ಪ್ರಥಮ ಮಾಹಿತಿ ವರದಿ
2. ಪಂಚನಾಮೆ
3. ರಾಸಾಯನಿಕ ವಿಶ್ಲೇಷಣಾ ವರದಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ಅಬಕಾರಿ ಕಾಯಿದೆ ಕಲಂ 32, 34 ಹಾಗೂ 38 ಎ ರ ಉಲ್ಲಂಘನೆ ಕಂಡು ಬಂದಿರುವುದರಿಂದ ಈ ಪ್ರಕರಣದ ವಾಹನ ಮಾಲೀಕರಾದ ಮೋಹನ್ ರಾಮಾನಾಯ್ಕ, ಹಲದಕಟ್ಟ, ಕೂಡ್ಲಿ ಸಿದ್ದಾಪುರ, ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೊಂದಾಯಿತ ಅಂಚೆ ಮುಖಾಂತರ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಆದರೆ ಸದರಿ ನೋಟೀಸು ಸ್ವೀಕೃತಗೊಳ್ಳದೇ ಅಂಚೆ ಲಕೋಟೆಯು

ಹಿಂದಿರುಗಿರುತ್ತದೆ ಮತ್ತು ಪ್ರಕರಣದಲ್ಲಿನ ಆರೋಪಿಗಳಿಗೆ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೊಂದಾಯಿತ ಅಂಚೆ ಮುಖಾಂತರ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಸದರಿ ನೋಟೀಸನ್ನು ಆರೋಪಿಗಳು ಪಡೆದು ಒಂದು ತಿಂಗಳು ಕಳೆದರೂ ವಾಹನ ಹಾಗೂ ಮುದ್ದೆಮಾಲಿನ ಹಕ್ಕು ಸಾಧಿಸಿ ಈ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ.

ಎಡಿಪಿಯವರು ಪ್ರಕರಣದ ಕಡತ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ತಮ್ಮ ವಾದವನ್ನು ಮಂಡಿಸಿದ್ದಾರೆ. ಪರವಾನಿಗೆ ಇಲ್ಲದೇ 20 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ವಾಹನ ಬಜಾಜ್ ಎಂ–80 ಸಂಖ್ಯೆ: ಕೆಎ–31–ಹೆಚ್–8755 ರಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿರುವಾಗ ಜಪ್ತು ಮಾಡಲಾಯಿತು. ರಾಸಾಯನಿಕ ತಜ್ಞರು ಜಪ್ತುಪಡಿಸಿದ ಮುದ್ದೆಮಾಲನ್ನು ಪರಿಶೀಲಿಸಿ ಅಬಕಾರಿ ಪದಾರ್ಥವಾಗಿರುವುದು ದೃಢಪಡಿಸಿರುತ್ತಾರೆ. ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಸದ್ರಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ನೋಟೀಸ್ ನೀಡಲಾಗಿದ್ದು, ಸದರಿ ನೋಟೀಸು ವಾಹನ ಮಾಲೀಕರಿಗೆ ಸ್ವೀಕೃತವಾಗದೆ ಅಂಚೆ ಲಕೋಟಿ ಹಿಂದಿರುಗಿರುತ್ತದೆ. ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಅಬಕಾರಿ ಕಾಯಿದೆ ಉಲ್ಲಂಘನೆಯಾಗಿದ್ದು, ಅದರಲ್ಲೂ ಪ್ರಮುಖವಾಗಿ ವಾಹನದ ಮಾಲೀಕರು ಈ ಪ್ರಕರಣದಲ್ಲಿ ತಾವು ಶಾಮೀಲಾಗಿಲ್ಲವೆಂಬ ಬಗ್ಗೆ, ತಮಗೆ ಪ್ರಕರಣದ ತಿಳುವಳಿಕೆ ಇರುವುದಿಲ್ಲ ಎಂಬ ಬಗ್ಗೆ ಮತ್ತು ಈ ಪ್ರಕರಣ ನಡೆಯದಂತೆ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿರುವ ಬಗ್ಗೆ ಈ ಪ್ರಾಧಿಕಾರಕ್ಕೆ ಯಾವುದೇ ಪುರಾವೆಗಳನ್ನು ಒದಗಿಸಿರುವುದಿಲ್ಲ ಹಾಗೂ ತೃಪ್ತಿಕರವಾಗಿ ಸಾಬೀತುಪಡಿಸಿರುವುದಿಲ್ಲ. ಸದ್ರಿ ಕಾಯಿದೆಯ ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಈ ಜವಾಬ್ದಾರಿ ಇರುತ್ತದೆ. ಅಲ್ಲದೆ ಕಲಂ 40 ರಂತೆ ಕರ್ನಾಟಕ ಅಬಕಾರಿ ಕಾಯಿದೆ ಉಲ್ಲಂಘನೆ ಆಗಿಲ್ಲವೆಂಬ ಬಗ್ಗೆ ವಾಹನದ ಮಾಲೀಕರು ಸಾಬೀತುಪಡಿಸದಿದ್ದಲ್ಲಿ, ವಾಹನದ ಮಾಲೀಕರು ಅಬಕಾರಿ ಕಾಯಿದೆ ಉಲ್ಲಂಘನೆ ಮಾಡಿದ್ದಾರೆಂದು ಭಾವಿಸಬಹುದಾಗಿರುವುದರಿಂದ ಈ ಪ್ರಕರಣವನ್ನು ಕಲಂ 43 (ಸಿ) ಅಡಿ ವಿಲೇಗೊಳಿಸಿ ಜಪ್ತಾದ 20 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ಹಾಗೂ ವಾಹನ ಬಜಾಜ್ ಎಂ–80 ಸಂಖ್ಯೆ: ಕೆಎ–31–ಹೆಚ್–8755 ವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದ ಕಡತ, ದಾಖಲಾತಿಗಳನ್ನು, ಎಡಿಪಿಯವರ ವಾದವನ್ನು ಹಾಗೂ ಅಬಕಾರಿ ಕಾಯಿದೆ, ಕಾನೂನುಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನವನ್ನು 3 ವರ್ಷ 8 ತಿಂಗಳು ಕಳೆದರೂ ಇದುವರೆಗೆ ಯಾರೂ ಕ್ಲೇಮು ಮಾಡಿರುವುದಿಲ್ಲ. ವಾಹನ ಮಾಲೀಕರಿಗೆ ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ಕಾರಣ ಕೇಳಿ ನೋಟೀಸ್ ಕಳುಹಿಸಲಾಗಿತ್ತು. ಆದರೆ ನೋಟೀಸು ಜಾರಿಗೊಳ್ಳದೇ ಅಂಚೆ ಲಕೋಟಿಯು ಹಿಂದಿರುಗಿರುತ್ತದೆ. ಅಂದರೆ ತಮ್ಮ ಜವಾಬ್ದಾರಿಯನ್ನು ವಾಹನದ ಮಾಲೀಕರು ನಿಭಾಯಿಸಿರುವುದಿಲ್ಲ. ಕಲಂ 40 ರ ಅಡಿಯಲ್ಲಿ ಇರುವ "ಪ್ರಿಸಂಷನ್" ವಾಹನದ ಮಾಲೀಕರಿಗೆ ಪ್ರತಿಕೂಲವಾಗಿದ್ದು, ನಿರಪರಾಧಿಗಳೆಂದು ಸಾಬೀತು ಪಡೆಸುವ ಜವಾಬ್ದಾರಿ ಸಹ ವಾಹನದ ಮಾಲೀಕರ ಮೇಲೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಮಾನ್ಯ ಎಡಿಪಿಯವರ ವಾದಕ್ಕೆ ಮನ್ನಣೆ ದೊರೆಯಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್ಇ/ಡಿಟಿಸಿಆರ್/309/2005–06 ದಿನಾಂಕ:24ನೇ ಡಿಸೆಂಬರ್, 2009**

ಪ್ರಕರಣದಲ್ಲಿ ತಿಳಿಸಿದ ಎಲ್ಲಾ ವಿವರಗಳನ್ನು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ನಲ್ಲಿ ದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಜೆ. ಕೃಷ್ಣ ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಈ ಮೊಕದ್ದಮೆಯಲ್ಲಿ ಇಲಾಖೆಗೆ ವಶಪಡಿಸಿಕೊಂಡಿರುವ 20 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ವಾಹನ ಬಜಾಜ್ ಎಂ–80 ಸಂಖ್ಯೆ:ಕೆಎ–31–ಹೆಚ್–8755ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ರಾಸಾಯನಿಕ ವಿಶ್ಲೇಷಣೆಗೆ ತೆಗೆದ 0.750 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ಹೊರತುಪಡಿಸಿ ಉಳಿದ 19.250 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ)(3) ರ ರೀತ್ಯಾ ಅಬಕಾರಿ ಉಪ ಅಧೀಕ್ಷಕರು, ಶಿವಮೊಗ್ಗ ಉಪ ವಿಭಾಗ ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:24–12–2009 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.199

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕರಣದ ಸಂಖ್ಯೆ : ಇಎಕ್ಸ್‌ಇ/ಡಿಟಿಸಿಆರ್/121/2008–09**

| **ಫಿರ್ಯಾದುದಾರರು :** | **ಆರೋಪಿ :** |
|---|---|
| ಅಬಕಾರಿ ಸಬ್ ಇನ್ಸ್‌ಪೆಕ್ಟರ್ | ಪತ್ತೆಯಾಗಿರುವುದಿಲ್ಲ. |
| ಸಾಗರ ವಲಯ. | |
| ಪ್ರ.ಮಾ.ವ ಸಂಖ್ಯೆ: 11/2008–09 | |
| ದಿನಾಂಕ: 06–10–2008. | |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:06–10–2008 ರಂದು ಫಿರ್ಯಾದುದಾರರು ಸುಮಾರು ಸಂಜೆ 6.00 ಗಂಟೆ ಸಮಯದಲ್ಲಿ ಸಾಗರ ತಾಲ್ಲೂಕು ಸೂರುಗುಪ್ಪೆ ಗ್ರಾಮದಿಂದ ಯಲಕುಂದ್ಲಿಗೆ ಹೋಗುವ ರಸ್ತೆಯಲ್ಲಿರುವ ಸತ್ಯನಾರಾಯಣ ಮಠದ ಹತ್ತಿರದಲ್ಲಿ ಅಬಕಾರಿ ದಾಳಿ ನಡೆಸಿದಾಗ ವಾಹನ ಯಮಹ ಕ್ರಕ್ಸ್ ಸಂ: ಕೆಎ–15–ಹೆಚ್–9753 ರಲ್ಲಿ ಕಪ್ಪು ಬಣ್ಣದ ರಬ್ಬರ್ ಟ್ಯೂಬಿನಲ್ಲಿ 20 ಲೀ. ಕಳ್ಳಭಟ್ಟಿ ಸಾರಾಯಿಯನ್ನು ಅಕ್ರಮವಾಗಿ ಹೊಂದಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆಮಾಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14(2) ರಂತೆ ಅಪರಾಧವೆಂದು ಇದೇ ಕಾಯಿದೆ ಕಲಂ 32, 34 ರ ರೀತ್ಯಾ ಶಿಕ್ಷಾರ್ಹವೆಂದು ಫಿರ್ಯಾದುದಾರರು ಪ್ರ.ಮಾ.ವ ಸಂಖ್ಯೆ: 11/2008–09 ದಿನಾಂಕ: 06–10–2008 ರಂದು ಮೊಕದ್ದಮೆಯನ್ನು ದಾಖಲಿಸಿ ಮುದ್ದೆಮಾಲನ್ನು ವಶಪಡಿಸಿಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಲಾದ ವಾಹನ ಯಮಹ ಕ್ರಕ್ಸ್ ಸಂ:ಕೆಎ–15–ಹೆಚ್–9753 ರ ನೊಂದಾಯಿತ ಮಾಲೀಕರು ಪರಮೇಶ್ವರಪ್ಪ ಬಿನ್ ಕಣ್ಣಪ್ಪ, ಕಾಗೋಡು ಗ್ರಾಮ, ಸಾಗರ ತಾಲ್ಲೂಕು ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಸಾಗರ ರವರು ನೀಡಿದ ಬಿ ಎಕ್ಸ್‌ಟ್ರಾಕ್ಟ್ ವರದಿಯಂತೆ ಕಂಡು ಬರುತ್ತದೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕಡತದಲ್ಲಿ ಕೆಳಕಂಡ ದಾಖಲಾತಿಗಳು ಕಂಡುಬರುತ್ತವೆ.

1. ಪ್ರಥಮ ಮಾಹಿತಿ ವರದಿ
2. ಪಂಚನಾಮೆ
3. ರಾಸಾಯನಿಕ ವಿಶ್ಲೇಷಣಾ ವರದಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ಅಬಕಾರಿ ಕಾಯಿದೆ ಕಲಂ 32, 34 ಹಾಗೂ 38 ಎ ರ ಉಲ್ಲಂಘನೆ ಕಂಡು ಬಂದಿರುವುದರಿಂದ ಈ ಪ್ರಕರಣದ ವಾಹನ ಮಾಲೀಕರಾದ ಪರಮೇಶ್ವರಪ್ಪ ಬಿನ್ ಕಣ್ಣಪ್ಪ, ಕಾಗೋಡು ಗ್ರಾಮ, ಸಾಗರ ತಾಲ್ಲೂಕು ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೊಂದಾಯಿತ ಅಂಚೆ ಮುಖಾಂತರ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಆದರೆ ಸದರಿ ನೋಟೀಸು ಸ್ವೀಕೃತಗೊಳ್ಳದೇ ಅಂಚೆ ಲಕೋಟೆಯು ಹಿಂದಿರುಗಿರುತ್ತದೆ.

ಎಡಿಪಿಯವರು ಪ್ರಕರಣದ ಕಡತ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ತಮ್ಮ ವಾದವನ್ನು ಮಂಡಿಸಿದ್ದಾರೆ. ಪರವಾನಿಗೆ ಇಲ್ಲದೇ 20 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ವಾಹನ ಯಮಹ ಕ್ರಕ್ಸ್ ಸಂ:ಕೆಎ–15–ಹೆಚ್–9753 ರಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿರುವಾಗ ಜಪ್ತು ಮಾಡಲಾಯಿತು. ರಾಸಾಯನಿಕ ತಜ್ಞರು ಜಪ್ತುಪಡಿಸಿದ ಮುದ್ದೆಮಾಲನ್ನು ಪರಿಶೀಲಿಸಿ ಅಬಕಾರಿ ಪದಾರ್ಥವಾಗಿರುವುದು ದೃಢಪಡಿಸಿರುತ್ತಾರೆ. ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಸದ್ರಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ನೋಟೀಸ್ ನೀಡಲಾಗಿದ್ದು, ಸದರಿ ನೋಟೀಸು ವಾಹನ ಮಾಲೀಕರಿಗೆ ಸ್ವೀಕೃತವಾಗದೆ ಅಂಚೆ ಲಕೋಟೆ ಹಿಂದಿರುಗಿರುತ್ತದೆ. ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಅಬಕಾರಿ ಕಾಯಿದೆ ಉಲ್ಲಂಘನೆಯಾಗಿರುವುದು ಸ್ಪಷ್ಟವಾಗುತ್ತದೆ. ಪ್ರಮುಖವಾಗಿ ವಾಹನದ ಮಾಲೀಕರು ಈ ಪ್ರಕರಣದಲ್ಲಿ ತಾವು ಶಾಮೀಲಾಗಿಲ್ಲವೆಂಬ ಬಗ್ಗೆ, ತಮಗೆ ಪ್ರಕರಣದ ತಿಳುವಳಿಕೆ ಇರುವುದಿಲ್ಲ ಎಂಬ ಬಗ್ಗೆ ಮತ್ತು ಈ ಪ್ರಕರಣ ನಡೆಯದಂತೆ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿರುವ ಬಗ್ಗೆ ಈ ಪ್ರಾಧಿಕಾರಕ್ಕೆ ಯಾವುದೇ ಪುರಾವೆಗಳನ್ನು ಒದಗಿಸಿರುವುದಿಲ್ಲ ಹಾಗೂ ತೃಪ್ತಿಕರವಾಗಿ ಸಾಬೀತುಪಡಿಸಿರುವುದಿಲ್ಲ. ಸದ್ರಿ ಕಾಯಿದೆಯ ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಈ ಜವಾಬ್ದಾರಿ ಇರುತ್ತದೆ. ಅಲ್ಲದೆ ಕಲಂ 40 ರಂತೆ ಕರ್ನಾಟಕ ಅಬಕಾರಿ ಕಾಯಿದೆ ಉಲ್ಲಂಘನೆ ಆಗಿಲ್ಲವೆಂಬ ಬಗ್ಗೆ ವಾಹನದ ಮಾಲೀಕರು ಸಾಬೀತುಪಡಿಸದಿದ್ದಲ್ಲಿ, ವಾಹನದ

ಮಾಲೀಕರು ಅಬಕಾರಿ ಕಾಯಿದೆ ಉಲ್ಲಂಘನೆ ಮಾಡಿದ್ದಾರೆಂದು ಭಾವಿಸಬಹುದಾಗಿರುವುದರಿಂದ ಈ ಪ್ರಕರಣವನ್ನು ಕಲಂ 43 (ಸಿ) ಅಡಿ ವಿಲೇಗೊಳಿಸಿ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದ ಕಡತ, ದಾಖಲಾತಿಗಳನ್ನು, ಎಡಿಪಿಯವರ ವಾದವನ್ನು ಹಾಗೂ ಅಬಕಾರಿ ಕಾಯಿದೆಯ ಕಲಂಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನವನ್ನು 1 ವರ್ಷ 3 ತಿಂಗಳು ಕಳೆದರೂ ಇದುವರೆಗೆ ಯಾರೂ ಕ್ಲೇಮು ಮಾಡಿರುವುದಿಲ್ಲ. ವಾಹನ ಮಾಲೀಕರಿಗೆ ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ಕಾರಣ ಕೇಳಿ ನೋಟೀಸ್ ಕಳುಹಿಸಲಾಗಿತ್ತು. ಆದರೆ ನೋಟೀಸು ಜಾರಿಗೊಳ್ಳದೇ ಅಂಚೆ ಲಕೋಟೆಯು ಹಿಂದಿರುಗಿರುತ್ತದೆ. ಅಂದರೆ ತಮ್ಮ ಜವಾಬ್ದಾರಿಯನ್ನು ವಾಹನದ ಮಾಲೀಕರು ನಿಭಾಯಿಸಿರುವುದಿಲ್ಲ. ಕಲಂ 40 ರ ಅಡಿಯಲ್ಲಿ ಇರುವ "ಪ್ರಿಸಂಷನ್" ವಾಹನದ ಮಾಲೀಕರಿಗೆ ಪ್ರತಿಕೂಲವಾಗಿದ್ದು, ನಿರಪರಾಧಿಗಳೆಂದು ಸಾಬೀತು ಪಡೆಸುವ ಜವಾಬ್ದಾರಿ ಸಹ ವಾಹನದ ಮಾಲೀಕರ ಮೇಲೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಮಾನ್ಯ ಎಡಿಪಿಯವರ ವಾದಕ್ಕೆ ಮನ್ನಣೆ ದೊರೆಯಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ / ಡಿಟಿಸಿಆರ್ / 121 / 2008–09 ದಿನಾಂಕ:24ನೇ ಡಿಸೆಂಬರ್, 2009**

ಪ್ರಕರಣದಲ್ಲಿ ತಿಳಿಸಿದ ಎಲ್ಲಾ ವಿವರಗಳನ್ನು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ನಲ್ಲಿ ದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಜೆ. ಕೃಷ್ಣ ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಈ ಮೊಕದ್ದಮೆಯಲ್ಲಿ ಇಲಾಖೆಗೆ ವಶಪಡಿಸಿಕೊಂಡಿರುವ ವಾಹನ ಯಮಹ ಕ್ರಕ್ಸ್ ಸಂ: ಕೆಎ–15–ಹೆಚ್–9753 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಈ ಪ್ರಾಧಿಕಾರದ ಸಮ ಸಂಖ್ಯೆಯ ನಡವಳಿ ದಿನಾಂಕ: 11–03–2009 ರ ಆದೇಶವನ್ನು ಪುರಸ್ಕರಿಸಿದೆ.

ಈ ಆದೇಶವನ್ನು ದಿನಾಂಕ:24–12–2009 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.200

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕರಣದ ಸಂಖ್ಯೆ : ಇಎಕ್ಸ್‌ಇ/ಪಿಟಿಸಿ/01/2008–09**

**ಫಿರ್ಯಾದುದಾರರು :**
ಪೊಲೀಸ್ ಸಬ್ ಇನ್ಸ್‌ಪೆಕ್ಟರ್
ಶಿಕಾರಿಪುರ ಟೌನ್ ಪೊಲೀಸ್ ಠಾಣೆ,
ಗುನ್ನೆ ಸಂಖ್ಯೆ: 81/2008
ದಿನಾಂಕ: 17–04–2008.

**ಆರೋಪಿ :**
1. ಚಂದ್ರಪ್ಪ ಬಿನ್ ಹಳದಪ್ಪ
   ಬಾಳೂರು ಗ್ರಾಮ, ಶಿಕಾರಿಪುರ ತಾ॥.
2. ಚಂದ್ರಪ್ಪ ಹೊಸೂರು ಗ್ರಾಮ
   ಶಿಕಾರಿಪುರ ತಾ॥.
3. ಶ್ರೀನಿವಾಸ, ಶ್ರೀನಿವಾಸ ವೈನ್ಸ್
   ಸ್ಟೋರ್, ಶಿಕಾರಿಪುರ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:17–04–2008 ರಂದು ಸುಮಾರು ಸಂಜೆ 5.00 ಗಂಟೆ ಸಮಯದಲ್ಲಿ ಶಿಕಾರಿಪುರ ತಾಲ್ಲೂಕಿನ ಹುಚ್ಚರಾಯ ಸ್ವಾಮಿ ಕೆರೆಯ ಏರಿಯ ಮೇಲೆ ಫಿರ್ಯಾದುದಾರರು ರಸ್ತೆಗಾವಲು ನಡೆಸುತ್ತಿದ್ದಾಗ 43,200 ಲೀ. ಮದ್ಯ ಹಾಗೂ 110.880 ಲೀ. ಬಿಯರ್ ಅನ್ನು ಅಕ್ರಮವಾಗಿ ವಾಹನ ಆಟೋ ಸಂಖ್ಯೆ: ಕೆಎ–15–4667 ರಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿರುವುದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14(2) ರಂತೆ ಅಪರಾಧವಾಗಿದ್ದು, ಇದೇ ಕಾಯಿದೆ ಕಲಂ 32, 34 ರ ರೀತ್ಯಾ ಶಿಕ್ಷಾರ್ಹವಾಗಿರುತ್ತದೆ. ಆದ್ದರಿಂದ ಫಿರ್ಯಾದುದಾರರು ಗುನ್ನೆ ಸಂಖ್ಯೆ: 81/2008 ದಿನಾಂಕ:17–04–2008 ರಂದು ಮೊಕದ್ದಮೆಯನ್ನು ದಾಖಲಿಸಿ ಮುದ್ದೆಮಾಲನ್ನು ವಶಪಡಿಸಿಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಲಾದ ವಾಹನ ಆಟೋ ಸಂಖ್ಯೆ: ಕೆಎ–15–4667 ರ ನೊಂದಾಯಿತ ಮಾಲೀಕರು ಚಂದ್ರಪ್ಪ ಬಿನ್ ಹಳದಪ್ಪ ಬಾಳೂರು ಗ್ರಾಮ, ಶಿಕಾರಿಪುರ ತಾಲ್ಲೂಕು ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ನೀಡಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕಡತದಲ್ಲಿ ಕೆಳಕಂಡ ದಾಖಲಾತಿಗಳು ಕಂಡುಬರುತ್ತವೆ.

1. ಪ್ರಥಮ ಮಾಹಿತಿ ವರದಿ
2. ಪಂಚನಾಮೆ
3. ರಾಸಾಯನಿಕ ವಿಶ್ಲೇಷಣಾ ವರದಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ಅಬಕಾರಿ ಕಾಯಿದೆ ಕಲಂ 32, 34 ಹಾಗೂ 38 ಎ ರ ಉಲ್ಲಂಘನೆ ಕಂಡು ಬಂದಿರುವುದರಿಂದ ಈ ಪ್ರಕರಣದ 1ನೇ ಆರೋಪಿ ಹಾಗೂ ವಾಹನ ಮಾಲೀಕರಾದ ಚಂದ್ರಪ್ಪ ಬಿನ್ ಹಳದಪ್ಪ ಬಾಳೂರು ಗ್ರಾಮ, ಶಿಕಾರಿಪುರ ತಾಲ್ಲೂಕು ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೊಂದಾಯಿತ ಅಂಚೆ ಮುಖಾಂತರ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಅದರಂತೆ ವಾಹನ ಮಾಲೀಕರು ತನಗೂ ಮತ್ತು ಪ್ರಕರಣದಲ್ಲಿನ ಅಪರಾಧಕ್ಕೂ ಯಾವುದೇ ರೀತಿಯಲ್ಲಿ ಸಂಬಂಧ ಇರುವುದಿಲ್ಲವೆಂದು ಹಾಗೂ ಪ್ರಕರಣದಲ್ಲಿ ಜಪ್ತು ಪಡಿಸಿದ ವಾಹನ ಹಾಗೂ ಮುದ್ದೆಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ಅಭ್ಯಂತರ ಇರುವುದಿಲ್ಲವೆಂದು ತಿಳಿಸಿರುತ್ತಾರೆ ಮತ್ತು ಪ್ರಕರಣದಲ್ಲಿ 2ನೇ ಹಾಗೂ 3ನೇ ಆರೋಪಿಗಳಿಗೆ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೊಂದಾಯಿತ ಅಂಚೆ ಮುಖಾಂತರ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಆದರೆ ಸದರಿ ಆರೋಪಿಗಳಿಗೆ ನೋಟೀಸು ಸ್ವೀಕೃತಿಗೊಳ್ಳದೇ ಅಂಚೆ ಲಕೋಟೆಯು ಹಿಂದಿರುಗಿರುತ್ತದೆ.

ಎಡಿಪಿಯವರು ಪ್ರಕರಣದ ಕಡತ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ತಮ್ಮ ವಾದವನ್ನು ಮಂಡಿಸಿದ್ದಾರೆ. ಪರವಾನಿಗೆ ಇಲ್ಲದೇ 43,200 ಲೀ. ಮದ್ಯ ಹಾಗೂ 110.880 ಲೀ. ಬಿಯರ್‌ನ್ನು ವಾಹನ ಆಟೋ ಸಂಖ್ಯೆ: ಕೆಎ–15–4667 ರಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿರುವಾಗ ಜಪ್ತು ಮಾಡಲಾಯಿತು. ರಾಸಾಯನಿಕ ತಜ್ಞರು ಜಪ್ತುಪಡಿಸಿದ ಮುದ್ದೆಮಾಲನ್ನು ಪರಿಶೀಲಿಸಿ ಅವುಗಳು ಅಬಕಾರಿ ಪದಾರ್ಥವಾಗಿರುವುದು ದೃಢಪಡಿಸಿರುತ್ತಾರೆ. ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಸದ್ರಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ನೋಟೀಸ್ ನೀಡಲಾಗಿದ್ದು, ಸದರಿ ನೋಟೀಸಿಗೆ ವಾಹನ ಮಾಲೀಕರು ತನಗೂ ಮತ್ತು ಪ್ರಕರಣದಲ್ಲಿನ ಅಪರಾಧಕ್ಕೂ ಯಾವುದೇ ರೀತಿಯಲ್ಲಿ ಸಂಬಂಧ ಇರುವುದಿಲ್ಲವೆಂದು ಹಾಗೂ ಪ್ರಕರಣದಲ್ಲಿ ಜಪ್ತು ಪಡಿಸಿದ ವಾಹನ ಹಾಗೂ ಮುದ್ದೆಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ಅಭ್ಯಂತರ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಅಬಕಾರಿ ಕಾಯಿದೆ ಉಲ್ಲಂಘನೆಯಾಗಿರುತ್ತದೆ ಮತ್ತು ಪ್ರಕರಣದಲ್ಲಿ ಜಪ್ತುಪಡಿಸಿದ ಮುದ್ದೆಮಾಲು ಹಾಗೂ ವಾಹನವನ್ನು ತಮ್ಮದೆಂದು ಹಕ್ಕು ಸಾಧಿಸಿ ಈ ಪ್ರಾಧಿಕಾರಕ್ಕೆ ಯಾರು ಸಂಪರ್ಕಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣವನ್ನು ಕಲಂ 43 ಎ ಅಡಿ ವಿಲೇಗೊಳಿಸಿ ಜಪ್ತುಪಡಿಸಿದ ಮುದ್ದೆಮಾಲು ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದ ಕಡತ, ದಾಖಲಾತಿಗಳನ್ನು, ಎಡಿಪಿಯವರ ವಾದವನ್ನು ಹಾಗೂ ಅಬಕಾರಿ ಕಾಯಿದೆಯ ಕಲಂಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನವನ್ನು 1 ವರ್ಷ 5 ತಿಂಗಳು ಕಳೆದರೂ ಇದುವರೆಗೆ ಯಾರೂ ಕ್ಲೇಮು ಮಾಡಿರುವುದಿಲ್ಲ. ವಾಹನ ಮಾಲೀಕರಿಗೆ ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ಕಾರಣ ಕೇಳಿ ನೋಟೀಸ್ ಕಳುಹಿಸಲಾಗಿತ್ತು. ಸದರಿ ನೋಟೀಸಿಗೆ ವಾಹನ ಮಾಲೀಕರು ಪ್ರಕರಣದಲ್ಲಿನ ಅಪರಾಧಕ್ಕೂ ಯಾವುದೇ ಸಂಬಂಧ ಇರುವುದಿಲ್ಲವೆಂದು ಮತ್ತು ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಹಾಗೂ ಮುದ್ದೆಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ಅಭ್ಯಂತರ ಇರುವುದಿಲ್ಲವೆಂದು ತಿಳಿಸಿರುತ್ತಾರೆ ಮತ್ತು ಪ್ರಕರಣದಲ್ಲಿ ಜಪ್ತುಪಡಿಸಿದ ಮುದ್ದೆಮಾಲು ಹಾಗೂ ವಾಹನವನ್ನು ತಮ್ಮದೆಂದು ಹಕ್ಕು ಸಾಧಿಸಿ ಈ ಪ್ರಾಧಿಕಾರಕ್ಕೆ ಯಾರು ಸಂಪರ್ಕಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಮಾನ್ಯ ಎಡಿಪಿಯವರ ವಾದಕ್ಕೆ ಮನ್ನಣೆ ದೊರೆಯಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ/ಡಿಟಿಸಿಆರ್/ 01 /2009–10 ದಿನಾಂಕ:24ನೇ ಡಿಸೆಂಬರ್, 2009**

ಪ್ರಕರಣದಲ್ಲಿ ತಿಳಿಸಿದ ಎಲ್ಲಾ ವಿವರಗಳನ್ನು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ನಲ್ಲಿ ದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಜೆ. ಕೃಷ್ಣ ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್

ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಈ ಮೊಕದ್ದಮೆಯಲ್ಲಿ ಇಲಾಖೆಗೆ ವಶಪಡಿಸಿಕೊಂಡಿರುವ 43,200 ಲೀ. ಮದ್ಯ ಹಾಗೂ 110.880 ಲೀ. ಬಿಯರ್‌ನ್ನು ವಾಹನ ಆಟೋ ಸಂಖ್ಯೆ: ಕೆಎ–15–4667 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಮದ್ಯ ಮತ್ತು ಬಿಯರ್‌ನ ಪ್ರಮಾಣವನ್ನು ಹೊರತುಪಡಿಸಿ ಉಳಿದ ಮದ್ಯ ಮತ್ತು ಬಿಯರ್‌ನ ಪ್ರಮಾಣವನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ)(3) ರ ರೀತ್ಯಾ ಅಬಕಾರಿ ಉಪ ಅಧೀಕ್ಷಕರು, ಶಿವಮೊಗ್ಗ ಉಪ ವಿಭಾಗ ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:24–12–2009 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.164

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕರಣದ ಸಂಖ್ಯೆ : ಇಎಕ್ಸ್‌ಇ/ಡಿಟಿಸಿಆರ್/99/2008–09**

**ಫಿರ್ಯಾದುದಾರರು :**
ಅಬಕಾರಿ ಸಬ್ ಇನ್ಸ್‌ಪೆಕ್ಟರ್–I
ಶಿಕಾರಿಪುರ ವಲಯ.
ಪ್ರ.ಮಾ.ವ ಸಂಖ್ಯೆ: 99/2008–09
ದಿನಾಂಕ: 22–09–2008.

**ಆರೋಪಿ :**
ಪತ್ತೆಯಾಗಿರುವುದಿಲ್ಲ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:22–09–2008 ರಂದು ಫಿರ್ಯಾದುದಾರರು ಸುಮಾರು ರಾತ್ರಿ 7.15 ಗಂಟೆ ಸಮಯದಲ್ಲಿ ಶಿಕಾರಿಪುರ ತಾಲ್ಲೂಕು ಶಿರಾಳಕೊಪ್ಪ ವ್ಯಾಪ್ತಿಯ ಯಳಗೇರಿಯ ಬಸ್ ನಿಲ್ದಾಣದ ಹತ್ತಿರ ಅಬಕಾರಿ ದಾಳಿ ನಡೆಸಿದಾಗ ವಾಹನ ಬಜಾಜ್ ಎಂ–80 ಸಂ: ಕೆಎ–17–ಎಲ್–8779 ರಲ್ಲಿ 30 ಲೀ. ಕಳ್ಳಭಟ್ಟಿ ಸಾರಾಯಿಯನ್ನು ಅಕ್ರಮವಾಗಿ ಹೊಂದಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆಮಾಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14(2) ರಂತೆ ಅಪರಾಧವೆಂದು ಇದೇ ಕಾಯಿದೆ ಕಲಂ 32, 34 ರ ರೀತ್ಯಾ ಶಿಕ್ಷಾರ್ಹವೆಂದು ಫಿರ್ಯಾದುದಾರರು ಪ್ರ.ಮಾ.ವ ಸಂಖ್ಯೆ: 05/2008–09 ದಿನಾಂಕ:22–09–2008 ರಂದು ಮೊಕದ್ದಮೆಯನ್ನು ದಾಖಲಿಸಿ ಮುದ್ದೆಮಾಲನ್ನು ವಶಪಡಿಸಿಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಲಾದ ವಾಹನ ಬಜಾಜ್ ಎಂ–80 ಸಂ: ಕೆಎ–17–ಎಲ್–8779 ರ ನೊಂದಾಯಿತ ಮಾಲೀಕರು ಕೆ. ಲಾಚನ ನಾಯ್ಕ ಬಿನ್ ಪೋಮ್ಯ ನಾಯ್ಕ, ಕಾಳಿಕದೇವಿ ರಸ್ತೆ, ದಾವಣಗೆರೆ ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ದಾವಣಗೆರೆ ರವರು ನೀಡಿದ ಬಿ ಎಕ್ಸ್‌ಟ್ರಾಕ್ಟ್ ವರದಿಯಂತೆ ಕಂಡು ಬರುತ್ತದೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕಡತದಲ್ಲಿ ಕೆಳಕಂಡ ದಾಖಲಾತಿಗಳು ಕಂಡುಬರುತ್ತವೆ.

1. ಪ್ರಥಮ ಮಾಹಿತಿ ವರದಿ
2. ಪಂಚನಾಮೆ
3. ರಾಸಾಯನಿಕ ವಿಶ್ಲೇಷಣಾ ವರದಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ಅಬಕಾರಿ ಕಾಯಿದೆ ಕಲಂ 32, 34 ಹಾಗೂ 38 ಎ ರ ಉಲ್ಲಂಘನೆ ಕಂಡು ಬಂದಿರುವುದರಿಂದ ಈ ಪ್ರಕರಣದ ವಾಹನ ಮಾಲೀಕರಾದ ಕೆ. ಲಾಚನ ನಾಯ್ಕ ಬಿನ್ ಪೋಮ್ಯ ನಾಯ್ಕ, ಕಾಳಿಕದೇವಿ ರಸ್ತೆ, ದಾವಣಗೆರೆ ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೊಂದಾಯಿತ ಅಂಚೆ ಮುಖಾಂತರ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಆದರೆ ಸದರಿ ನೋಟೀಸು ಸ್ವೀಕೃತಗೊಳ್ಳದೇ ಅಂಚೆ ಲಕೋಟೆಯು ಹಿಂದಿರುಗಿರುತ್ತದೆ.

ಎಡಿಪಿಯವರು ಪ್ರಕರಣದ ಕಡತ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ತಮ್ಮ ವಾದವನ್ನು ಮಂಡಿಸಿದ್ದಾರೆ. ಪರವಾನಿಗೆ ಇಲ್ಲದೇ 30 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ವಾಹನ ಬಜಾಜ್ ಎಂ–80 ಸಂ: ಕೆಎ–17–ಎಲ್–8779 ರಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿರುವಾಗ ಜಪ್ತು ಮಾಡಲಾಯಿತು. ರಾಸಾಯನಿಕ ತಜ್ಞರು ಜಪ್ತುಪಡಿಸಿದ ಮುದ್ದೆಮಾಲನ್ನು ಪರಿಶೀಲಿಸಿ ಅಬಕಾರಿ ಪದಾರ್ಥವಾಗಿರುವುದು ದೃಢಪಡಿಸಿರುತ್ತಾರೆ. ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಸದ್ರಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ನೋಟೀಸ್ ನೀಡಲಾಗಿದ್ದು, ಸದರಿ ನೋಟೀಸು ವಾಹನ ಮಾಲೀಕರಿಗೆ ಸ್ವೀಕೃತವಾಗದೆ ಅಂಚೆ ಲಕೋಟೆ ಹಿಂದಿರುಗಿರುತ್ತದೆ. ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಅಬಕಾರಿ ಕಾಯಿದೆ ಉಲ್ಲಂಘನೆಯಾಗಿರುವುದು ಸ್ಪಷ್ಟವಾಗುತ್ತದೆ. ಅದರಲ್ಲೂ ಪ್ರಮುಖವಾಗಿ ವಾಹನದ ಮಾಲೀಕರು ಈ ಪ್ರಕರಣದಲ್ಲಿ ತಾವು ಶಾಮೀಲಾಗಿಲ್ಲವೆಂಬ ಬಗ್ಗೆ, ತಮಗೆ ಪ್ರಕರಣದ ತಿಳುವಳಿಕೆ ಇರುವುದಿಲ್ಲ ಎಂಬ ಬಗ್ಗೆ ಮತ್ತು ಈ ಪ್ರಕರಣ ನಡೆಯದಂತೆ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿರುವ ಬಗ್ಗೆ ಈ ಪ್ರಾಧಿಕಾರಕ್ಕೆ ಯಾವುದೇ ಪುರಾವೆಗಳನ್ನು ಒದಗಿಸಿರುವುದಿಲ್ಲ ಹಾಗೂ ತೃಪ್ತಿಕರವಾಗಿ ಸಾಬೀತುಪಡಿಸಿರುವುದಿಲ್ಲ. ಸದ್ರಿ ಕಾಯಿದೆಯ ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಈ ಜವಾಬ್ದಾರಿ ಇರುತ್ತದೆ. ಅಲ್ಲದೆ ಕಲಂ 40 ರಂತೆ ಕರ್ನಾಟಕ ಅಬಕಾರಿ ಕಾಯಿದೆ ಉಲ್ಲಂಘನೆ ಆಗಿಲ್ಲವೆಂಬ ಬಗ್ಗೆ ವಾಹನದ ಮಾಲೀಕರು ಸಾಬೀತುಪಡಿಸದಿದ್ದಲ್ಲಿ, ವಾಹನದ ಮಾಲೀಕರು ಅಬಕಾರಿ ಕಾಯಿದೆ ಉಲ್ಲಂಘನೆ ಮಾಡಿದ್ದಾರೆಂದು ಭಾವಿಸಬಹುದಾಗಿರುವುದರಿಂದ ಈ ಪ್ರಕರಣವನ್ನು ಕಲಂ 43 (ಸಿ) ಅಡಿ ವಿಲೇಗೊಳಿಸಿ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದ ಕಡತ, ದಾಖಲಾತಿಗಳನ್ನು, ಎಡಿಪಿಯವರ ವಾದವನ್ನು ಹಾಗೂ ಅಬಕಾರಿ ಕಾಯಿದೆಯ ಕಲಂಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನವನ್ನು 1 ವರ್ಷ 3 ತಿಂಗಳು ಕಳೆದರೂ ಇದುವರೆಗೆ ಯಾರೂ ಕ್ಲೇಮು ಮಾಡಿರುವುದಿಲ್ಲ. ವಾಹನ ಮಾಲೀಕರಿಗೆ ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ಕಾರಣ ಕೇಳಿ ನೋಟೀಸ್ ಕಳುಹಿಸಲಾಗಿತ್ತು. ಆದರೆ ನೋಟೀಸು ಜಾರಿಗೊಳ್ಳದೇ ಅಂಚೆ ಲಕೋಟೆಯು ಹಿಂದಿರುಗಿರುತ್ತದೆ. ಅಂದರೆ ತಮ್ಮ ಜವಾಬ್ದಾರಿಯನ್ನು ವಾಹನದ ಮಾಲೀಕರು ನಿಭಾಯಿಸಿರುವುದಿಲ್ಲ. ಕಲಂ 40 ರ ಅಡಿಯಲ್ಲಿ ಇರುವ "ಪ್ರಿಸಂಷನ್" ವಾಹನದ ಮಾಲೀಕರಿಗೆ ಪ್ರತಿಕೂಲವಾಗಿದ್ದು, ನಿರಪರಾಧಿಗಳೆಂದು ಸಾಬೀತು ಪಡೆಸುವ ಜವಾಬ್ದಾರಿ ಸಹ ವಾಹನದ ಮಾಲೀಕರ ಮೇಲೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಮಾನ್ಯ ಎಡಿಪಿಯವರ ವಾದಕ್ಕೆ ಮನ್ನಣೆ ದೊರೆಯಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್ಇ/ಡಿಟಿಸಿಆರ್/ 99 / 2008–09 ದಿನಾಂಕ:24ನೇ ಡಿಸೆಂಬರ್, 2009**

ಪ್ರಕರಣದಲ್ಲಿ ತಿಳಿಸಿದ ಎಲ್ಲಾ ವಿವರಗಳನ್ನು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ನಲ್ಲಿ ದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಜೆ. ಕೃಷ್ಣ ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಈ ಮೊಕದ್ದಮೆಯಲ್ಲಿ ಇಲಾಖೆಗೆ ವಶಪಡಿಸಿಕೊಂಡಿರುವ ವಾಹನ ಬಜಾಜ್ ಎಂ–80 ಸಂ: ಕೆಎ–17–ಎಲ್–8779 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಈ ಪ್ರಾಧಿಕಾರದ ಸಮ ಸಂಖ್ಯೆಯ ನಡವಳಿ ದಿನಾಂಕ:28–02–2009 ರ ಆದೇಶವನ್ನು ಪುರಸ್ಕರಿಸಿದೆ.

ಈ ಆದೇಶವನ್ನು ದಿನಾಂಕ:24–12–2009 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.165

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ,**
**ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**
**ಪ್ರಕರಣದ ಸಂಖ್ಯೆ : ಇಎಕ್ಸ್ಇ/ಡಿಟಿಸಿಆರ್/ 222 /2007–08**

**ಫಿರ್ಯಾದುದಾರರು :**

ಅಬಕಾರಿ ಸಬ್ ಇನ್ಸ್‌ಪೆಕ್ಟರ್
ಜಾರಿ ಮತ್ತು ತನಿಖೆ, ಶಿವಮೊಗ್ಗ ತಾಲ್ಲೂಕು
ಪ್ರ.ಮಾ.ವ ಸಂಖ್ಯೆ: 20/2005–06
ದಿನಾಂಕ: 21–02–2008

**ಆರೋಪಿ :**

1. ಬಿ. ವೆಂಕಟೇಶ್ ಬಿನ್ ಬಾಬುರಾವ್ ಮೀನಾ ನರ್ಸಿಂಗ್ ಹೋಂ ಹಿಂಭಾಗ, ತರೀಕೆರೆ ರಸ್ತೆ, ಭದ್ರಾವತಿ.
2. ಚನ್ನಕೇಶವ ಯಾನೆ ಬಂಗಾರಿ ಬಿನ್ ಮಗೋಜಿರಾವ್ ಹೊಸ ಕೋಡಿಹಳ್ಳಿ, ತರೀಕೆರೆ ರಸ್ತೆ, ಭದ್ರಾವತಿ.

**ಪ್ರಸ್ತಾವನೆ:**

ದಿನಾಂಕ:21–02–2008 ರಂದು ಸುಮಾರು ರಾತ್ರಿ 8.45 ಗಂಟೆ ಸಮಯದಲ್ಲಿ ಶಿವಮೊಗ್ಗ ತಾಲ್ಲೂಕಿನ ಅಬ್ಬಲಗೆರೆ ಗ್ರಾಮದ ಬಳಿ ರಸ್ತೆಗಾವಲು ನಡೆಸುತ್ತಿರುವಾಗ ವಾಹನ ಬಜಾಜ್ ಸ್ಕೂಟರ್ ಸಂಖ್ಯೆ: ಕೆಎ–17–ಹೆಚ್–3908 ರಲ್ಲಿ 60 ಲೀ. ಮದ್ಯಸಾರವನ್ನು ಅಕ್ರಮವಾಗಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಹಚ್ಚಿ ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11, 14(2) ರ ರೀತ್ಯಾ ಅಪರಾಧವೆಂದು ಹಾಗೂ ಇದೇ ಕಾಯ್ದೆ ಕಲಂ 32, 34 ಹಾಗೂ 38(ಎ) ರ ರೀತ್ಯಾ ಶಿಕ್ಷಾರ್ಹವೆಂದು ಫಿರ್ಯಾದುದಾರರು ಪ್ರ.ಮಾ.ವ ಸಂಖ್ಯೆ: 20/2005–06 ದಿನಾಂಕ:21–02–2008 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ವಾಹನ ಮತ್ತು ಮುದ್ದೆಮಾಲನ್ನು ವಶಕ್ಕೆ ತೆಗೆದುಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಲಾದ ವಾಹನ ಬಜಾಜ್ ಸ್ಕೂಟರ್ ಸಂಖ್ಯೆ:ಕೆಎ–17–ಹೆಚ್–3908 ರ ನೊಂದಾಯಿತ ಮಾಲೀಕರು ರಾಜಾರಾಮ್ ಬಿನ್ ರಾಮಮೂರ್ತಿ ಹಳೇ ಕೋಡಿಹಳ್ಳಿ, ಟಿ.ಕೆ ರೋಡ್, ಭದ್ರಾವತಿ ಇವರು ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿವಮೊಗ್ಗ ಇವರು ನೀಡಿರುವ ದಾಖಲಾತಿ ಪ್ರಕಾರ ತಿಳಿದು ಬಂದಿರುತ್ತದೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕಡತದಲ್ಲಿ ಕೆಳಕಂಡ ದಾಖಲಾತಿಗಳು ಕಂಡುಬರುತ್ತವೆ.

4. ಪ್ರಥಮ ಮಾಹಿತಿ ವರದಿ
5. ಪಂಚನಾಮೆ
6. ರಾಸಾಯನಿಕ ವಿಶ್ಲೇಷಣಾ ವರದಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ಅಬಕಾರಿ ಕಾಯಿದೆ ಕಲಂ 32, 34 ಹಾಗೂ 38 ಎ ರ ಉಲ್ಲಂಘನೆ ಕಂಡು ಬಂದಿರುವುದರಿಂದ ಈ ಪ್ರಕರಣದ ವಾಹನ ಮಾಲೀಕರಾದ ರಾಜಾರಾಮ್ ಬಿನ್ ರಾಮಮೂರ್ತಿ ಹಳೇ ಕೋಡಿಹಳ್ಳಿ, ಟಿ.ಕೆ ರೋಡ್, ಭದ್ರಾವತಿ ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸ್‌ನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೋಂದಣಿ ಅಂಚೆ ಮೂಲಕ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ವಾಹನ ಮಾಲೀಕರು ಸದರಿ ನೋಟೀಸನ್ನು ಪಡೆದಿರುತ್ತಾರೆ. ಪ್ರಕರಣದಲ್ಲಿನ ಅಪರಾಧಕ್ಕೂ ತಮಗೂ ಯಾವುದೇ ಸಂಬಂಧವಿರುವುದಿಲ್ಲವೆಂದು ಕಾರಣ ಕೇಳಿ ನೋಟೀಸಿಗೆ ಉತ್ತರ ಸಲ್ಲಿಸಿರುತ್ತಾರೆ. ಪ್ರಕರಣದಲ್ಲಿನ ಆರೋಪಿಗಳಿಗೆ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸ್‌ನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೋಂದಣಿ ಅಂಚೆ ಮೂಲಕ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಆರೋಪಿಗಳು ಕಾರಣ ಕೇಳಿ ನೋಟೀಸನ್ನು ಪಡೆದು 1 ತಿಂಗಳು ಕಳೆದರೂ ಇದುವರೆಗೂ ವಾಹನದ ಹಕ್ಕು ಸಾಧಿಸಿ ಈ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ.

ಎಡಿಪಿಯವರು ಪ್ರಕರಣದ ಕಡತ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ತಮ್ಮ ವಾದವನ್ನು ಮಂಡಿಸಿದ್ದಾರೆ. ಪರವಾನಿಗೆ ಇಲ್ಲದೇ 60 ಲೀ. ಮದ್ಯಸಾರವನ್ನು ವಾಹನ ಬಜಾಜ್ ಸ್ಕೂಟರ್ ಸಂಖ್ಯೆ: ಕೆಎ–17–ಹೆಚ್–3908 ರಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿರುವಾಗ ಆರೋಪಿಗಳಿಂದ ಜಪ್ತು ಮಾಡಲಾಗಿದೆ. ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿದ ಮುದ್ದೆಮಾಲು ಅಬಕಾರಿ ಪದಾರ್ಥವಾಗಿರುವುದಾಗಿ ದೃಢಪಡುತ್ತದೆ. ಈ ಪ್ರಕರಣದಲ್ಲಿ ಅಬಕಾರಿ ಕಾಯಿದೆ ಉಲ್ಲಂಘನೆಯಾಗಿರುವುದು ಸ್ಪಷ್ಟವಾಗುತ್ತದೆ. ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟೀಸಿಗೆ ವಾಹನ ಮಾಲೀಕರು ಪಡೆದು ತಮ್ಮ ಉತ್ತರದಲ್ಲಿ ಪ್ರಕರಣದಲ್ಲಿನ ಅಪರಾಧಕ್ಕೂ ತಮಗೂ ಯಾವುದೇ ಸಂಬಂಧವಿರುವುದಿಲ್ಲವೆಂದು ತಿಳಿಸಿರುತ್ತಾರೆ ಮತ್ತು ಸದರಿ ವಾಹನ ಹಾಗೂ ಮುದ್ದೆಮಾಲನ್ನು ತಮ್ಮದೆಂದು ಹಕ್ಕು ಸಾಧಿಸಿ ಬೇರೆಯಾರೂ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣವನ್ನು ಕಲಂ 43 ಸಿ ಅಡಿ ವಿಲೇಗೊಳಿಸಿ ಪ್ರಕರಣದಲ್ಲಿ ಜಪ್ತಾದ ಅಬಕಾರಿ ಪದಾರ್ಥ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದ ಕಡತ, ದಾಖಲಾತಿಗಳನ್ನು, ಎಡಿಪಿಯವರ ವಾದವನ್ನು ಹಾಗೂ ಅಬಕಾರಿ ಕಾಯಿದೆಯ ಕಲಂಗಳನ್ನು ಪರಿಶೀಲಿಸಲಾಯಿತು. ವಾಹನ ಮಾಲೀಕರಿಗೆ ಲಭ್ಯವಿರುವ ವಿಳಾಸಕ್ಕೆ ನೋಟೀಸ್‌ನ್ನು ಕಳುಹಿಸಲಾಗಿರುತ್ತದೆ. ಕಾರಣ ಕೇಳಿ ನೋಟೀಸ್ ಅನ್ನು ವಾಹನದ ಮಾಲೀಕರು ಪಡೆದುಕೊಂಡು ತಮ್ಮ ಉತ್ತರದಲ್ಲಿ ಪ್ರಕರಣದಲ್ಲಿನ ಅಪರಾಧಕ್ಕೂ ತಮಗೂ ಯಾವುದೇ ಸಂಬಂಧವಿರುವುದಿಲ್ಲವೆಂದು ತಿಳಿಸಿರುತ್ತಾರೆ ಮತ್ತು ಸದರಿ ವಾಹನ ಹಾಗೂ ಮುದ್ದೆಮಾಲನ್ನು ತಮ್ಮದೆಂದು ಹಕ್ಕು ಸಾಧಿಸಿ ಬೇರೆಯಾರೂ ಸಹ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ.ಈ ಹಿನ್ನೆಲೆಯಲ್ಲಿ ಮಾನ್ಯ ಎಡಿಪಿಯವರ ವಾದಕ್ಕೆ ಮನ್ನಣೆ ದೊರೆಯಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ/ ಡಿಟಿಸಿಆರ್ / 222 / 2007–08 ದಿನಾಂಕ:24ನೇ ಡಿಸೆಂಬರ್, 2009**

ಪ್ರಸ್ತಾವನೆಯಲ್ಲಿನ ವಿವರಗಳನ್ನು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 ಸಿ ನಲ್ಲಿ ದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಜೆ. ಕೃಷ್ಣ ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ 60 ಲೀ. ಮದ್ಯಸಾರವನ್ನು ಮತ್ತು ವಾಹನ ಬಜಾಜ್ ಸ್ಕೂಟರ್ ಸಂಖ್ಯೆ:ಕೆಎ–17–ಹೆಚ್–3908 ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಪ್ರಕರಣದಲ್ಲಿ ಜಪ್ತಾದ 60 ಲೀ. ಮದ್ಯಸಾರದಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಪ್ರಮಾಣವನ್ನು ಹೊರತು ಪಡಿಸಿ ಉಳಿದ ಪ್ರಮಾಣದ ಕಳ್ಳಭಟ್ಟಿ ಸಾರಾಯಿಯನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಎ)(3) ರ ರೀತ್ಯಾ ಅಬಕಾರಿ ಉಪ ಅಧೀಕ್ಷಕರು, ಸಾಗರ ಉಪ ವಿಭಾಗ ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:24–12–2009 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.221

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕರಣದ ಸಂಖ್ಯೆ : ಇಎಕ್ಸ್‌ಇ/ಡಿಟಿಸಿಆರ್/465/2006–07**

**ಫಿರ್ಯಾದುದಾರರು :**
ಅಬಕಾರಿ ಇನ್ಸ್‌ಪೆಕ್ಟರ್
ಸಾಗರ ವಲಯ
ಪ್ರ.ಮಾ.ವ ಸಂ: 27/2008–09
ದಿನಾಂಕ : 12–04–2009

**ಆರೋಪಿ :**
1) ನಾಗರಾಜ್ ಬಿನ್ ನಾರಾಯಣಪ್ಪ
ನೆರಲಗಿ ಗ್ರಾಮ, ಸಾಗರ ತಾ॥.
2) ಶ್ರೀ ಕುಮಾರ್ ಬಿನ್ ದಿ॥ ಸುಕುಮಾರ್
ಎಸ್.ಎನ್.ಎನ್ ನಗರ, ಸಾಗರ.

**ಪ್ರಸ್ತಾವನೆ:**

ದಿನಾಂಕ:12–04–2009 ರಂದು ಫಿರ್ಯಾದುದಾರರು ಸುಮಾರು ರಾತ್ರಿ 7.15 ಗಂಟೆ ಸಮಯದಲ್ಲಿ ಸಾಗರ ತಾಲ್ಲೂಕು ತೊರಗೂಡು–ನರುಗಿ ಕ್ರಾಸ್‌ನಲ್ಲಿ ಅಬಕಾರಿ ದಾಳಿ ನಡೆಸಿದಾಗ ವಾಹನ ಟಿವಿಎಸ್ ಸುಜುಕಿ ಮ್ಯಾಕ್ಸ್–100 ಸಂ: ಕೆಎ–17–ಎಲ್–6302 ರಲ್ಲಿ 20 ಲೀ. ಕಳ್ಳಭಟ್ಟಿ ಸಾರಾಯಿಯನ್ನು ಅಕ್ರಮವಾಗಿ ಹೊಂದಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆಮಾಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14(2) ರಂತೆ ಅಪರಾಧವೆಂದು ಇದೇ ಕಾಯಿದೆ ಕಲಂ 32, 34 ರ ರೀತ್ಯಾ ಶಿಕ್ಷಾರ್ಹವೆಂದು ಫಿರ್ಯಾದುದಾರರು ಪ್ರ.ಮಾ.ವ ಸಂಖ್ಯೆ: 27/2008–09 ದಿನಾಂಕ:12–04–2009 ರಂತೆ ಮೊಕದ್ದಮೆ ದಾಖಲಿಸಿ ವಾಹನ ಮತ್ತು ಮುದ್ದೆಮಾಲನ್ನು ವಶಕ್ಕೆ ತೆಗೆದುಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಲಾದ ವಾಹನ ಟಿವಿಎಸ್ ಸುಜುಕಿ ಮ್ಯಾಕ್ಸ್–100 ಸಂ:ಕೆಎ–17–ಎಲ್–6302 ರ ನೊಂದಾಯಿತ ಮಾಲೀಕರು ಶ್ರೀ ಪರಶುರಾಮಪ್ಪ ಬಿನ್ ಕೆ. ಕನ್ನಪ್ಪ ಕಾಗೋಡು ಪೋಸ್ಟ್, ಸಾಗರ ತಾ॥ ಇವರು ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಸಾಗರ ಇವರು ನೀಡಿರುವ ದಾಖಲಾತಿ ಪ್ರಕಾರ ತಿಳಿದು ಬಂದಿರುತ್ತದೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕಡತದಲ್ಲಿ ಕೆಳಕಂಡ ದಾಖಲಾತಿಗಳು ಕಂಡುಬರುತ್ತವೆ.

1. ಪ್ರಥಮ ಮಾಹಿತಿ ವರದಿ
2. ಪಂಚನಾಮೆ
3. ರಾಸಾಯನಿಕ ವಿಶ್ಲೇಷಣಾ ವರದಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ಅಬಕಾರಿ ಕಾಯಿದೆ ಕಲಂ 32, 34 ಹಾಗೂ 38 ಎ ರ ಉಲ್ಲಂಘನೆ ಕಂಡು ಬಂದಿರುವುದರಿಂದ ಈ ಪ್ರಕರಣದ ವಾಹನ ಮಾಲೀಕರಾದ ಶ್ರೀ ಪರಶುರಾಮಪ್ಪ ಬಿನ್ ಕೆ. ಕನ್ನಪ್ಪ ಕಾಗೋಡು ಪೋಸ್ಟ್, ಸಾಗರ ತಾ॥ ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸ್‌ನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೋಂದಣಿ ಅಂಚೆ ಮೂಲಕ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ವಾಹನ ಮಾಲೀಕರು ಸದರಿ ನೋಟೀಸನ್ನು ಪಡೆದಿರುತ್ತಾರೆ.

ಆದರೆ ನೋಟೀಸ್ ಪಡೆದು 20 ದಿನ ಕಳೆದರೂ ಇದುವರೆಗೂ ವಾಹನದ ಹಕ್ಕು ಸಾಧಿಸಿ ಈ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ. ಪ್ರಕರಣದ ಆರೋಪಿಗಳಿಗೆ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸ್‌ನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೋಂದಣಿ ಅಂಚೆ ಮೂಲಕ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಅದರಂತೆ 1ನೇ ಆರೋಪಿಯು ಕಾರಣ ಕೇಳಿ ನೋಟೀಸನ್ನು ಪಡೆದುಕೊಂಡು 20 ದಿನ ಕಳೆದರೂ ಇದುವರೆಗೂ ವಾಹನದ ಹಕ್ಕು ಸಾಧಿಸಿ ಈ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ ಮತ್ತು 2ನೇ ಆರೋಪಿಗೆ ರವಾನಿಸಿದ ಅಂಚೆ ಲಕೋಟೆಯು ಪೂರ್ಣ ವಿಳಾಸ ಇರುವುದಿಲ್ಲವೆಂದು ಹಿಂದಿರುಗಿರುತ್ತದೆ.

ಎಡಿಪಿಯವರು ಪ್ರಕರಣದ ಕಡತ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ತಮ್ಮ ವಾದವನ್ನು ಮಂಡಿಸಿದ್ದಾರೆ. ಪರವಾನಿಗೆ ಇಲ್ಲದೇ 20 ಲೀ. ಕಳ್ಳಭಟ್ಟಿ ಸಾರಾಯಿಯನ್ನು ವಾಹನ ಟಿವಿಎಸ್ ಸುಜುಕಿ ಮ್ಯಾಕ್ಸ್–100 ಸಂ: ಕೆಎ–17–ಎಲ್–6302 ರಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿರುವಾಗ ಆರೋಪಿಗಳಿಂದ ಜಪ್ತು ಮಾಡಲಾಗಿದೆ. ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿದ ಮುದ್ದೆಮಾಲು ಅಬಕಾರಿ ಪದಾರ್ಥವಾಗಿರುವುದಾಗಿ ದೃಢಪಡುತ್ತದೆ. ಈ ಪ್ರಕರಣದಲ್ಲಿ ಅಬಕಾರಿ ಕಾಯಿದೆ ಉಲ್ಲಂಘನೆಯಾಗಿರುವುದು ಸ್ಪಷ್ಟವಾಗುತ್ತದೆ. ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟೀಸನ್ನು ವಾಹನ ಮಾಲೀಕರು ಪಡೆದು 20 ದಿನಗಳು ಕಳೆದರೂ ಇದುವರೆಗೂ ವಾಹನದ ಹಕ್ಕು ಸಾಧಿಸಿ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ ಮತ್ತು ಸದರಿ ವಾಹನ ಹಾಗೂ ಮುದ್ದೆಮಾಲನ್ನು ತಮ್ಮದೆಂದು ಹಕ್ಕು ಸಾಧಿಸಿ ಬೇರೆಯಾರೂ ಸಹ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ. ಪ್ರಮುಖವಾಗಿ ವಾಹನದ ಮಾಲೀಕರು ಈ ಪ್ರಕರಣದಲ್ಲಿ ತಾವು ಶಾಮೀಲಾಗಿಲ್ಲವೆಂಬ ಬಗ್ಗೆ, ತಮಗೆ ಪ್ರಕರಣದ ತಿಳುವಳಿಕೆ ಇರುವುದಿಲ್ಲ ಎಂಬ ಬಗ್ಗೆ ಮತ್ತು ಈ ಪ್ರಕರಣ ನಡೆಯದಂತೆ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿರುವ ಬಗ್ಗೆ ಈ ಪ್ರಾಧಿಕಾರಕ್ಕೆ ಯಾವುದೇ ಪುರಾವೆಗಳನ್ನು ಒದಗಿಸಿರುವುದಿಲ್ಲ ಹಾಗೂ ತೃಪ್ತಿಕರವಾಗಿ ಸಾಬೀತುಪಡಿಸಿರುವುದಿಲ್ಲ. ಸದ್ರಿ ಕಾಯಿದೆಯ ಕಲಂ 43 (ಬಿ) ಅಡಿಯಲ್ಲಿ ವಾಹನದ ಮಾಲೀಕರಿಗೆ ಈ ಜವಾಬ್ದಾರಿ ಇರುತ್ತದೆ. ಅಲ್ಲದೆ ಕಲಂ 40 ರಂತೆ ಕರ್ನಾಟಕ ಅಬಕಾರಿ ಕಾಯಿದೆ ಉಲ್ಲಂಘನೆ ಆಗಿಲ್ಲವೆಂಬ ಬಗ್ಗೆ ವಾಹನದ ಮಾಲೀಕರು ಸಾಬೀತುಪಡಿಸದಿದ್ದಲ್ಲಿ, ವಾಹನದ ಮಾಲೀಕರು ಅಬಕಾರಿ ಕಾಯಿದೆ ಉಲ್ಲಂಘನೆ ಮಾಡಿದ್ದಾರೆಂದು ಭಾವಿಸಬೇಕಾಗುತ್ತದೆ. ಆದ್ದರಿಂದ ಈ ಪ್ರಕರಣವನ್ನು ಕಲಂ 43 ಸಿ ಅಡಿ ವಿಲೇಗೊಳಿಸಿ ಪ್ರಕರಣದಲ್ಲಿ ಜಪ್ತಾದ ಅಬಕಾರಿ ಪದಾರ್ಥ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದ ಕಡತ, ದಾಖಲಾತಿಗಳನ್ನು ಹಾಗೂ ಎಡಿಪಿಯವರ ವಾದ, ಅಬಕಾರಿ ಕಾಯಿದೆಯ ಕಲಂಗಳನ್ನು ಪರಿಶೀಲಿಸಲಾಯಿತು. ವಾಹನ ಮಾಲೀಕರಿಗೆ ಲಭ್ಯವಿರುವ ವಿಳಾಸಕ್ಕೆ ನೋಟೀಸ್‌ನ್ನು ಕಳುಹಿಸಲಾಗಿರುತ್ತದೆ. ಕಾರಣ ಕೇಳಿ ನೋಟೀಸ್ ಅನ್ನು ವಾಹನದ ಮಾಲೀಕರು ಪಡೆದುಕೊಂಡಿರುತ್ತಾರೆ. ಕಾರಣ ಕೇಳಿ ನೋಟೀಸ್ ಪಡೆದು 20 ದಿನಗಳು ಕಳೆದರೂ ಇದುವರೆಗೂ ವಾಹನದ ಹಕ್ಕು ಸಾಧಿಸಿ ಈ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ. ಅಂದರೆ ತಮ್ಮ ಜವಾಬ್ದಾರಿಯನ್ನು ವಾಹನದ ಮಾಲೀಕರು ನಿಭಾಯಿಸಿರುವುದಿಲ್ಲ. ಕಲಂ 40 ರ ಅಡಿಯಲ್ಲಿ ಇರುವ "ಪ್ರಿಸಂಷನ್" ವಾಹನದ ಮಾಲೀಕರಿಗೆ ಪ್ರತಿಕೂಲವಾಗಿದ್ದು, ನಿರಪರಾಧಿಗಳೆಂದು ಸಾಬೀತು ಪಡೆಸುವ ಜವಾಬ್ದಾರಿ ಸಹ ವಾಹನದ ಮಾಲೀಕರ ಮೇಲೆ ಇರುತ್ತದೆ ಮತ್ತು ಸದರಿ ವಾಹನ ಹಾಗೂ ಮುದ್ದೆಮಾಲನ್ನು ತಮ್ಮದೆಂದು ಹಕ್ಕು ಸಾಧಿಸಿ ಬೇರೆಯಾರೂ ಸಹ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ.ಈ ಹಿನ್ನೆಲೆಯಲ್ಲಿ ಮಾನ್ಯ ಎಡಿಪಿಯವರ ವಾದಕ್ಕೆ ಮನ್ನಣೆ ದೊರೆಯಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ/ ಡಿಟಿಸಿಆರ್ / 465 / 2008–09 ದಿನಾಂಕ:24ನೇ ಡಿಸೆಂಬರ್, 2009**

ಪ್ರಸ್ತಾವನೆಯಲ್ಲಿನ ವಿವರಗಳನ್ನು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 ಸಿ ನಲ್ಲಿ ದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಜೆ. ಕೃಷ್ಣ ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ 20 ಲೀ. ಕಳ್ಳಭಟ್ಟಿ ಸಾರಾಯಿಯನ್ನು ಮತ್ತು ಟಿವಿಎಸ್ ಸುಜುಕಿ ಮ್ಯಾಕ್ಸ್–100 ಸಂ: ಕೆಎ–17–ಎಲ್–6302 ಅನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಪ್ರಕರಣದಲ್ಲಿ ಜಪ್ತಾದ 20 ಲೀಟರ್ ಕಳ್ಳಭಟ್ಟಿ ಸಾರಾಯಿಯಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಪ್ರಮಾಣವನ್ನು ಹೊರತು ಪಡಿಸಿ ಉಳಿದ ಪ್ರಮಾಣದ ಕಳ್ಳಭಟ್ಟಿ ಸಾರಾಯಿಯನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಎ)(3) ರ ರೀತ್ಯಾ ಅಬಕಾರಿ ಉಪ ಅಧೀಕ್ಷಕರು, ಸಾಗರ ಉಪ ವಿಭಾಗ ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:24–12–2009 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.216

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ : ಇಎಕ್ಸ್‌ಇ/ಪಿಟಿಸಿ/ 12 /2009–10, ದಿನಾಂಕ:11ನೇ ಜನವರಿ, 2010**

**ಫಿರ್ಯಾದುದಾರರು :**

ಪೊಲೀಸ್ ಇನ್ಸ್‌ಪೆಕ್ಟರ್
ಅಬಕಾರಿ ಮತ್ತು ಲಾಟರಿ ನಿಷೇಧ ವಿಶೇಷ
ಪೊಲೀಸ್ ಠಾಣೆ, ಶಿವಮೊಗ್ಗ.
ಗುನ್ನೆ ಸಂಖ್ಯೆ: 15/2009
ದಿನಾಂಕ: 05–08–2009.

**ಆರೋಪಿ :**

1. ರಾಮ್ ಆಸರೆ ಪಾಂಡೆ
   ಜೋನ್‌ಪುರ್, ಉತ್ತರ ಪ್ರದೇಶ
2. ಸೆಲ್ವಿನ್ ಬಿನ್ ವಿಜಯ್ ವಿಕ್ಟರ್
   ಮಂಟಿರೋ ಇಂದೋರ್, ಮಧ್ಯ ಪ್ರದೇಶ
3. ಶಿವಾನಂದ ಬಿನ್ ಶಿವರಾಂ
   ಕಾಮಾಕ್ಷಿ ಬೀದಿ, ಶಿವಮೊಗ್ಗ.
   ಮತ್ತು ಇತರರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:05–08–2009 ರಂದು ಫಿರ್ಯಾದುದಾರರು ಬೆಳಿಗ್ಗೆ 5.30 ಗಂಟೆ ಸಮಯದಲ್ಲಿ ಶಿವಮೊಗ್ಗ ನಗರದಲ್ಲಿ ಹೊಳೆಹೊನ್ನೂರು ರಸ್ತೆಯಲ್ಲಿರುವ ರೈಲ್ವೇ ಗೇಟ್ ಹತ್ತಿರ ರಸ್ತೆಗಾವಲು ಮಾಡುವಾಗ ವಾಹನ ಲಾರಿ ಸಂ: ಕೆಎ–28–ಎ–1689 ರಲ್ಲಿ 35 ಲೀ. ಸಾಮರ್ಥ್ಯದ 172 ಕ್ಯಾನ್‌ಗಳಲ್ಲಿ ತುಂಬಿದ ಸ್ಪಿರಿಟ್ ಅನ್ನು ಅಕ್ರಮವಾಗಿ ಹೊಂದಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆಮಾಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14(2) ರಂತೆ ಅಪರಾಧವೆಂದು ಹಾಗೂ ಇದೇ ಕಾಯಿದೆ ಕಲಂ 32, 34 ರ ರೀತ್ಯಾ ಶಿಕ್ಷಾರ್ಹವೆಂದು ಫಿರ್ಯಾದುದಾರರು ದೂರು ನೀಡಿದ ಮೇರೆಗೆ ಠಾಣಾಧಿಕಾರಿಗಳು ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಶಿವಮೊಗ್ಗ ಇವರು ಗುನ್ನೆ ಸಂಖ್ಯೆ: 15/2009 ದಿ: 05–08–2009 ರಂತೆ ಮೊಕದ್ದಮೆ ದಾಖಲಿಸಿ ವಾಹನ ಮತ್ತು ಮುದ್ದೆಮಾಲನ್ನು ವಶಕ್ಕೆ ತೆಗೆದುಕೊಂಡಿರುತ್ತಾರೆ. ಸದರಿ ವಾಹನ ಮತ್ತು ಮುದ್ದೆಮಾಲನ್ನು ಮುಟ್ಟುಗೋಲು ಪ್ರಕ್ರಿಯೆಗಾಗಿ ಅಬಕಾರಿ ಇಲಾಖೆಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಶಿವಮೊಗ್ಗ ವಲಯ ನಂ.2 ಇವರು ಪ್ರಕರಣದಲ್ಲಿ ಜಪ್ತುಪಡಿಸಲಾದ ಸ್ಪಿರೀಟ್‌ನ ರಾಸಾಯನಿಕ ವಿಶ್ಲೇಷಣಾ ವರದಿ ಹಾಗೂ ವಾಹನದ ಲಾರಿ ಸಂ:ಕೆಎ–28–ಎ–1689 ರ 'ಬಿ' ರಿಜಿಸ್ಟರ್ ಎಕ್ಸ್‌ಟ್ರಾಕ್ಟ್‌ನ್ನು ಸಾರಿಗೆ ಅಧಿಕಾರಿಗಳಿಂದ ಪಡೆದು ದಿನಾಂಕ:09–12–2009 ರ ತಮ್ಮ ವರದಿಯಲ್ಲಿ ವಾಹನ ಹಾಗೂ ಮುದ್ದೆಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಲಾದ ವಾಹನ ಲಾರಿ ಸಂ: ಕೆಎ–28–ಎ–1689 ರ ನೊಂದಾಯಿತ ಮಾಲೀಕರು ಸಂಜಯ್ ಬಿನ್ ತುಕರಾಮ್, ನಂ.39, 3ನೇ ಮುಖ್ಯರಸ್ತೆ, ಸಮೀರ್‌ಪುರ, ಕೆಂಪೇಗೌಡ ನಗರ, ಚಾಮರಾಜಪೇಟೆ, ಬೆಂಗಳೂರು ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಂಗಳೂರು (ದಕ್ಷಿಣ) ರವರು ನೀಡಿದ ಬಿ ಎಕ್ಸ್‌ಟ್ರಾಕ್ಟ್ ವರದಿಯಂತೆ ಇರುತ್ತದೆ.

ಈ ಪ್ರಕರಣದಲ್ಲಿ ಮೇಲ್ನೋಟಕ್ಕೆ ಅಬಕಾರಿ ಕಾಯಿದೆ ಕಲಂ 32, 34 ಹಾಗೂ 38 ಎ ರ ಉಲ್ಲಂಘನೆ ಕಂಡು ಬಂದಿರುವುದರಿಂದ ಈ ಪ್ರಕರಣದ ವಾಹನ ಮಾಲೀಕರಾದ ಸಂಜಯ್ ಬಿನ್ ತುಕರಾಮ್, ನಂ.39, 3ನೇ ಮುಖ್ಯರಸ್ತೆ, ಸಮೀರ್‌ಪುರ, ಕೆಂಪೇಗೌಡ ನಗರ, ಚಾಮರಾಜಪೇಟೆ, ಬೆಂಗಳೂರು ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೊಂದಾಯಿತ ಅಂಚೆ ಮುಖಾಂತರ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಆದರೆ ಸದರಿ ನೋಟೀಸು ಸ್ವೀಕೃತಗೊಳ್ಳದೇ ಅಂಚೆ ಲಕೋಟೆಯು ಹಿಂದಿರುಗಿರುತ್ತದೆ. ಪ್ರಕರಣದಲ್ಲಿನ ಆರೋಪಿಗಳಿಗೆ ಕಲಂ 43 (ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಈ ಕಛೇರಿಯಲ್ಲಿ ಲಭ್ಯವಿರುವ ವಿಳಾಸಕ್ಕೆ ನೊಂದಾಯಿತ ಅಂಚೆ ಮುಖಾಂತರ ರವಾನಿಸಿ 7 ದಿನ ಕಾಲವಕಾಶ ನೀಡಿ ಈ ಬಗ್ಗೆ ಅವರ ವಿವರಣೆ ನೀಡಲು ಸೂಚಿಸಲಾಗಿತ್ತು. ಪ್ರಕರಣದಲ್ಲಿನ 1ನೇ ಆರೋಪಿಗೆ ಕಳುಹಿಸಿದ ಕಾರಣ ಕೇಳಿ ನೋಟೀಸು ಸ್ವೀಕೃತಗೊಳ್ಳದೆ ಅಂಚೆ ಲಕೋಟೆಯು ಹಿಂದಿರುಗಿರುತ್ತದೆ. 2ನೇ ಹಾಗೂ 3ನೇ ಆರೋಪಿಗಳು ಕಾರಣ ಕೇಳಿ ನೋಟೀಸನ್ನು ಪಡೆದಿರುತ್ತಾರೆ. 2ನೇ ಆರೋಪಿಯು ನೋಟೀಸು ಪಡೆದು 10 ದಿನ ಕಳೆದರೂ ವಾಹನ ಹಾಗೂ ಮುದ್ದೆಮಾಲಿನ ಹಕ್ಕು ಸಾಧಿಸಿ ಈ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ ಹಾಗೂ 3ನೇ ಆರೋಪಿಯು ನೋಟೀಸು ಪಡೆದು 19 ದಿವಸ ಕಳೆದರೂ ವಾಹನ ಹಾಗೂ ಮುದ್ದೆಮಾಲಿನ ಹಕ್ಕು ಸಾಧಿಸಿ ಈ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ.

ಈ ಪ್ರಕರಣವನ್ನು ವಿಚಾರಣೆಗೆ ತೆಗೆದುಕೊಂಡು ಸರ್ಕಾರದ ಪರ ವಿಚಾರಣೆ ಮಾಡಿದ ಇಬ್ಬರು ಸಾಕ್ಷಿದಾರರ ಹೇಳಿಕೆಗಳನ್ನು ದಾಖಲಿಸಿಕೊಳ್ಳಲಾಯ್ತು. ಈ ಪ್ರಕರಣದಲ್ಲಿ ಈ ಕೆಳಕಂಡ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುತ್ತದೆ.

1. ದಿನಾಂಕ:05–08–2009 ರಂದು ವಾಹನ ಲಾರಿ ಸಂ:ಕೆಎ–28–ಎ–1689 ನ್ನು ಅಕ್ರಮ ಮದ್ಯಸಾರ ಸಾಗಾಟ ಮಾಡಲಾಗುತ್ತಿತ್ತು ಎಂಬುದನ್ನು ಫಿರ್ಯಾದಿ ಪರ ಸಾಬೀತು ಪಡಿಸಲಾಗಿದೆಯೇ?
2. ವಾಹನದ ಮಾಲೀಕರು ಇಲ್ಲವೆ ಅವರ ಪ್ರತಿನಿಧಿ ಇಲ್ಲವೆ ವಾಹನವನ್ನು ಜಪ್ತು ಮಾಡಿದ ಕಾಲಕ್ಕೆ ಅದರ ಸುಪರ್ದಿ ಹೊಂದಿದ ವ್ಯಕ್ತಿ ಇವರುಗಳು ಸದರಿ ವಾಹನದಲ್ಲಿ ಕಾನೂನು ಬಾಹಿರವಾಗಿ ಮದ್ಯಸಾರ ಸಾಗಾಟ ಮಾಡಿರುವುದು ತಮ್ಮ ತಿಳುವಳಿಕೆ ಅಥವಾ ಪರಿಜ್ಞಾನದಿಂದ ಉಂಟಾಗಿರುವುದಿಲ್ಲವೆಂದು ಹಾಗೂ ಸದರಿ ವಾಹನವನ್ನು ಅಕ್ರಮವಾಗಿ ಮದ್ಯಸಾರ ಸಾಗಾಟ ಮಾಡಲು ಉಪಯೋಗಿಸದಂತೆ ಸಮರ್ಪಕ ಹಾಗೂ ಅಗತ್ಯ ಮುಂಜಾಗ್ರತ ಕ್ರಮ ತೆಗೆದುಕೊಂಡ ಬಗ್ಗೆ ಸಾಬೀತುಪಡಿಸಲಾಗಿದೆಯೇ?
3. ಪ್ರಕರಣದಲ್ಲಿ ಜಪ್ತು ಮಾಡಲಾದ ವಾಹನ ಲಾರಿ ಸಂ:ಕೆಎ–28–ಎ–1689 ಮತ್ತು ಸ್ಪಿರೀಟ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೇ?

ಈ ಮೇಲಿನ ವಿವಾದಾಂಶಗಳಿಗೆ ಕೆಳಗಿನಂತೆ ಉತ್ತರಿಸುತ್ತೇನೆ.

1. ಸಕರಾತ್ಮಕ
2. ನಕರಾತ್ಮಕ
3. ಸಕರಾತ್ಮಕ

**ಕಾರಣಗಳು:**

**ವಿವದಾಂಶ 1.**

ಸರ್ಕಾರದ ಪರವಾಗಿ ಪ್ರಕರಣ ಪತ್ತೆ ಹಚ್ಚಿದ ಶ್ರೀ ಎಸ್.ಕೆ. ಪ್ರಹ್ಲಾದ್, ಅಂದಿನ ಪೋಲೀಸ್ ಇನ್ಸ್‌ಪೆಕ್ಟರ್, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಶಿವಮೊಗ್ಗ (ಪ್ರ.ಸ. 1) ಇವರು ದಿನಾಂಕ:11–01–2010 ರಂದು ಈ ಪ್ರಾಧಿಕಾರದ ಮುಂದೆ ಮುಖ್ಯ ವಿಚಾರಣೆಯಲ್ಲಿ ಈ ಕೆಳಗಿನಂತೆ ಸಾಕ್ಷಿ ನುಡಿದಿರುತ್ತಾರೆ.

ದಿನಾಂಕ:04–08–2009 ರಂದು ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗದ ಮಾನ್ಯ ಐ.ಜಿ.ಪಿ, ಬೆಂಗಳೂರು ಹಾಗೂ ಮಾನ್ಯ ಎಸ್.ಪಿ ರವರ ಖಚಿತ ವರ್ತಮಾನದ ಮೇರೆಗೆ ರಾತ್ರಿ 9.00 ಗಂಟೆಯಿಂದ ಚಿತ್ರದುರ್ಗ ಜಿಲ್ಲೆಯ ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗದ ಪೊಲೀಸ್ ಇನ್ಸ್‌ಪೆಕ್ಟರ್ ರೊಂದಿಗೆ ಶಿವಮೊಗ್ಗ ನಗರದಿಂದ ಹೊಳೆಹೊನ್ನೂರಿಗೆ ಹೋಗುವ ರಸ್ತೆಯಲ್ಲಿರುವ ಶಿವಮೊಗ್ಗ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಯ ಬಳಿ ರಸ್ತೆಗಾವಲು ಮಾಡುತ್ತಿರುವಾಗ ದಿನಾಂಕ: 05–08–2009 ರ ಬೆಳಗಿನ ಜಾವ 5.30 ಗಂಟೆಗೆ ಹೊಳೆಹೊನ್ನೂರು ಕಡೆಯಿಂದ ಒಂದು ಕಾರ್ಗೋ ಕಂಟೈನರ್ ಬಾಡಿಯ ಭಾರಿ ವಾಹನವು ಬರುತ್ತಿರುವುದು ಕಂಡು ಬಂದಿತ್ತು. ಸದ್ರಿ ಲಾರಿಯನ್ನು ನಾನು ಹಾಗೂ ಸಿಬ್ಬಂದಿಗಳು ತಡೆದಾಗ ಲಾರಿಯಲ್ಲಿದ್ದ ಕೆಲವು ಜನರು ಓಡಿಹೋಗಿರುತ್ತಾರೆ. ನಮ್ಮ ಸಿಬ್ಬಂದಿಗಳು ಬೆನ್ನಟ್ಟಿದರೂ ಸಿಕ್ಕಿರುವುದಿಲ್ಲ. ಲಾರಿಯಲ್ಲಿ ಉಳಿದ ಡ್ರೈವರ್, ಕ್ಲೀನರ್ ಹಾಗೂ ಇನ್ನೋರ್ವ ವ್ಯಕ್ತಿಗಳನ್ನು ವಿಚಾರಿಸಲಾಗಿ ಅವರುಗಳ ಹೆಸರು ಕ್ರಮವಾಗಿ ರಾಮ್ ಆಸರೆ ಪಾಂಡೆ ಬಿನ್ ಜಗತ್‌ಪಾಲ್ ಪಾಂಡೆ, ಸೆಲ್ವಿನ್ ಬಿನ್ ವಿಜಯ್ ವಿಕ್ಟರ್ ಮಂಟೆರೋ, ಶಿವಾನಂದ ಬಿನ್ ಶಿವರಾಂ ಆಗಿರುತ್ತದೆ. ಇವರುಗಳನ್ನು ಲಾರಿಯಲ್ಲಿ ಏನು ಇದೆ ಎಂದು ವಿಚಾರಿಸಿದಾಗ ಲಾರಿಯಲ್ಲಿ ಏನನ್ನೂ ಸಾಗಿಸುತ್ತಿಲ್ಲ. ಲಾರಿಯಲ್ಲಿ ಏನೂ ಇಲ್ಲವೆಂದು ತಿಳಿಸಿರುತ್ತಾರೆ. ನಂತರ ಅವರು ಮಂಗಳೂರಿಗೆ ಹೋಗುತ್ತಿರುವುದಾಗಿ ತಿಳಿಸಿದರು. ಲಾರಿಯ ಹಿಂಭಾಗದ ಕಂಟೇನರ್‌ನ ಬಾಗಿಲನ್ನು ತೆರೆಯಿಸಿ ಪರಿಶೀಲಿಸಿದೆವು. ಲಾರಿಯ ಕ್ಯಾಬಿನ್ ಹಿಂಭಾಗ ಒಂದು ಕಂಪಾರ್ಟ್‌ಮೆಂಟ್ ಮಾಡಿ ಬೋಲ್ಟ್ ನಟ್ ಹಾಕಿ ತಗಡಿನ ಶೀಟನ್ನು ಜೋಡಿಸಿರುವುದು ಕಂಡು ಬಂದಿದ್ದು, ಸದ್ರಿ ಶೀಟನ್ನು ತೆಗೆಸಿ ನೋಡಿದಾಗ ಡ್ರೈವರ್‌ನ ಹಿಂಭಾಗದಲ್ಲಿದ್ದ ಆ ಕಂಪಾರ್ಟ್‌ಮೆಂಟ್‌ನಲ್ಲಿ ಬಿಳಿ ಕ್ಯಾನ್‌ಗಳಿರುವುದು ಕಂಡವು. ಕ್ಯಾನಿನ ಮುಚ್ಚಳ ತೆರೆದು ಪರಿಶೀಲಿಸಿದಾಗ ಘಾಟು ವಾಸನೆ ಕಂಡು ಬಂದಿತು. ಅದನ್ನು ಸ್ಪಿರಿಟ್ ಎಂದು ಖಚಿತಪಡಿಸಿಕೊಂಡೆವು. ನಂತರ ವಾಹನದ ನಂಬರನ್ನು ಪರಿಶೀಲಿಸಲಾಗಿ ಕೆಎ–28–ಎ–1689 ಆಗಿರುತ್ತದೆ. ವಾಹನ ಹಾಗೂ ಲಾರಿಯಲ್ಲಿದ್ದ 172 ಸ್ಪಿರಿಟ್ ಕ್ಯಾನ್‌ಗಳನ್ನು ವಶಕ್ಕೆ ತೆಗೆದುಕೊಂಡು ಸ್ಥಳ ಪಂಚನಾಮೆಯನ್ನು ತಯಾರಿಸಿದೆವು. ಸ್ಥಳ ಪಂಚನಾಮೆಯನ್ನು ಈಗ ಗುರುತಿಸುತ್ತಿದ್ದು, ಅದನ್ನು ಪಿ–1 ಎಂದು ಗುರುತಿಸಲಾಯ್ತು. ಅದರಲ್ಲಿನ ನನ್ನ ಸಹಿಯನ್ನು ಪಿ–1(ಎ) ಎಂದು ಗುರುತಿಸಲಾಯ್ತು.

ರಾಮ್ ಆಸರೆ ಪಾಂಡೆ ಬಿನ್ ಜಗತ್‌ಪಾಲ್ ಪಾಂಡೆ ವಾಹನದ ಡ್ರೈವರ್, ಸೆಲ್ವಿನ್ ಬಿನ್ ವಿಜಯ್ ವಿಕ್ಟರ್ ಮಂಟೆರೋ ವಾಹನದ ಕ್ಲೀನರ್, ಶಿವಾನಂದ ಬಿನ್ ಶಿವರಾಂ ಹಾಗೂ ಓಡಿ ಹೋದ ವ್ಯಕ್ತಿಗಳ ಮತ್ತು ವಾಹನ ಮಾಲೀಕನ ವಿರುದ್ಧ ಸೂಕ್ತ ಕಾನೂನಿನ ಕ್ರಮಕೈಗೊಳ್ಳಲು ಕೋರಿ ಅಮಾನತ್ತು ಪಡಿಸಿಕೊಂಡ ವಾಹನ ಸಂಖ್ಯೆ: ಕೆಎ–28–ಎ–1689 ಮತ್ತು

172 ಸ್ಪಿರಿಟ್ ಕ್ಯಾನ್‌ಗಳನ್ನು ಠಾಣಾಧಿಕಾರಿಗಳು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳದ ವಿಶೇಷ ಪೋಲೀಸ್ ಠಾಣೆ, ಶಿವಮೊಗ್ಗ ಇವರಿಗೆ ಹಸ್ತಾಂತರಿಸುತ್ತಾ ದೂರು ಸಲ್ಲಿಸಿದನು. ಅದನ್ನು ಪಿ–2 ಎಂದು ಗುರುತಿಸಲಾಯ್ತು. ಅದರಲ್ಲಿನ ನನ್ನ ಸಹಿಯನ್ನು ಪಿ–2(ಎ) ಎಂದು ಗುರುತಿಸಲಾಯ್ತು.

ವಾಹನ ಸಂಖ್ಯೆ:ಕೆಎ–28–ಎ–1689 ನ್ನು ಅಕ್ರಮವಾಗಿ ಸ್ಪಿರಿಟ್ ಸಾಗಾಣಿಕೆಗಾಗಿಯೇ ಬಳಸಲಾಗಿರುವುದರಿಂದ ವಾಹನ ಹಾಗೂ ಸ್ಪಿರೀಟ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ.

ಪಾಟೀ ಸವಾಲು ಯಾರದ್ದೂ ಇರುವುದಿಲ್ಲ.

ಸರ್ಕಾರದ ಪರವಾಗಿ ಪ್ರಕರಣ ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ ಶ್ರೀ ನೂರುಂದಪ್ಪ, ಮುಖ್ಯಪೇದೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಶಿವಮೊಗ್ಗ ಇವರು ದಿನಾಂಕ: 11–01–2010 ರಂದು ಮುಖ್ಯ ವಿಚಾರಣೆಯಲ್ಲಿ ಈ ಕೆಳಗಿನಂತೆ ಸಾಕ್ಷಿ ನುಡಿದಿರುತ್ತಾರೆ.

ಶ್ರೀ ಎಸ್.ಕೆ ಪ್ರಹ್ಲಾದ್ ಪೋಲೀಸ್ ಇನ್ಸ್‌ಪೆಕ್ಟರ್ ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಶಿವಮೊಗ್ಗ ಇವರು ದಿನಾಂಕ:05–08–2009 ರಂದು 5.30 ಗಂಟೆಯ ಬೆಳಗಿನ ಜಾವದಲ್ಲಿ ಶಿವಮೊಗ್ಗ ನಗರದಿಂದ ಹೊಳೆಹೊನ್ನೂರಿಗೆ ಹೋಗುವ ರಸ್ತೆಯಲ್ಲಿ ಬರುವ ಶಿವಮೊಗ್ಗ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಯ ಬಳಿ ಕಾಯುತ್ತಿರುವಾಗ ಹೊಳೆಹೊನ್ನೂರು ಕಡೆಯಿಂದ ಶಿವಮೊಗ್ಗ ಕಡೆಗೆ ಬರುತ್ತಿರುವ ಕಾರ್ಗೋ ಕಂಟೈನರ್ ಬಾಡಿಯ ಭಾರೀ ವಾಹನದಲ್ಲಿ 172 ಕ್ಯಾನ್‌ಗಳಲ್ಲಿ ಅಕ್ರಮವಾಗಿ ಮದ್ಯಸಾರದ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ ವಾಹನ ಹಾಗೂ ಮದ್ಯಸಾರದ 172 ಕ್ಯಾನ್‌ಗಳನ್ನು ಅಮಾನತ್ತುಪಡಿಸಿಕೊಂಡು ರಾಮ್ ಆಸರೆ ಪಾಂಡೆ ಬಿನ್ ಜಗತ್ ಪಾಲ್ ಪಾಂಡೆ, ಸೆಲ್ವಿನ್ ಬಿನ್ ವಿಜಯ್ ವಿಕ್ಟರ್ ಮಂಟೆರೋ, ಶಿವಾನಂದ ಬಿನ್ ಶಿವರಾಂ ಮತ್ತು ಇತರರ ವಿರುದ್ಧ ಸೂಕ್ತ ಕ್ರಮಕೈಗೊಳ್ಳುವಂತೆ ಕೋರಿ ಸ್ಥಳದಲ್ಲಿ ತಯಾರಿಸಿದ ಪಂಚನಾಮೆ ಹಾಗೂ ಅಮಾನತ್ತು ಪಡಿಸಿಕೊಂಡ ವಸ್ತುಗಳನ್ನು ಹಾಜರುಪಡಿಸಿರುತ್ತಾರೆ. ಸದ್ರಿ ಅಧಿಕಾರಿಯವರು ನೀಡಿದ ದೂರಿನ ಮೇರೆಗೆ ದಿನಾಂಕ:05–08–2009 ರಂದು ಸದ್ರಿ ಆರೋಪಿತರ ವಿರುದ್ಧ ಗುನ್ನೆ ಸಂಖ್ಯೆ:15/2009 ರಂತೆ ಮೊಕದ್ದಮೆ ದಾಖಲಿಸಿಕೊಂಡಿರುತ್ತೇನೆ. ಪ್ರ.ಮಾ.ವರದಿಯನ್ನು ಈಗ ಗುರುತಿಸುತ್ತಿದ್ದು, ಅದನ್ನು ಪಿ–3 ಎಂದು ಅದರಲ್ಲಿನ ನನ್ನ ಸಹಿಯನ್ನು ಪಿ–3(ಎ) ಎಂದು ಗುರುತಿಸಲಾಯ್ತು.

ಅಮಾನತ್ತುಪಡಿಸಿದ ವಾಹನದ ಸಂಖ್ಯೆ:ಕೆಎ–28–ಎ–1689 ಆಗಿದ್ದು ಅದರಲ್ಲಿ 172 ಸ್ಪಿರಿಟ್ ಕ್ಯಾನ್‌ಗಳಿರುವುದು ನಿಜ ಸಂಗತಿಯಾಗಿರುತ್ತದೆ. ಈ ಬಗ್ಗೆ ತಯಾರಿಸಿದ ಪಿಎಫ್‌ನ್ನು ಈಗ ಗುರುತಿಸುತ್ತಿದ್ದು, ಅದನ್ನು ಪಿ–4 ಎಂದು ಹಾಗೂ ಅದರಲ್ಲಿನ ನನ್ನ ಸಹಿಯನ್ನು ಪಿ–4(ಎ) ಎಂದು ಗುರುತಿಸಲಾಯ್ತು.

ಪ್ರಕರಣದಲ್ಲಿ ಜಪ್ತು ಪಡಿಸಿದ ಕ್ಯಾನ್‌ಗಳಲ್ಲಿನ ದ್ರವವನ್ನು ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಮಾದರಿಯನ್ನು ರಾಸಾಯನಿಕ ವಿಶ್ಲೇಷಕರು ಚಿತ್ರದುರ್ಗ ಇವರು ಪರೀಕ್ಷಿಸಿ ಸದರಿ ದ್ರವದಲ್ಲಿ ಆಲ್ಕೋಹಾಲ್ ಇರುವುದು ಹಾಗೂ ಅದು ಸ್ಪಿರೀಟ್ ಎಂದು ಖಚಿತಪಡಿಸಿರುತ್ತದೆ. ಇದರಿಂದ ಸದರಿ ದ್ರವವು ಅಬಕಾರಿ ಪದಾರ್ಥವೆಂದು ಸ್ಪಷ್ಟವಾಗುತ್ತದೆ. ರಾಸಾಯನಿಕ ವಿಶ್ಲೇಷಕರ ವರದಿಯನ್ನು ಈಗ ಗುರುತಿಸುತ್ತಿದ್ದು, ಅದನ್ನು ಪಿ–5 ಎಂದು ಗುರುತಿಸಲಾಯ್ತು.

ಪ್ರಕರಣದಲ್ಲಿ ಜಪ್ತುಪಡಿಸಿದ ವಸ್ತುಗಳ ಪೈಕಿ ಪಿಎಫ್‌ನಲ್ಲಿ ಕಾಣಿಸಿದ ಕ್ರಮ ಸಂಖ್ಯೆ: 1 ಮತ್ತು 2 ಅಂದರೆ ವಾಹನ ಹಾಗೂ ಸ್ಪಿರೀಟ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅಬಕಾರಿ ಉಪ ಆಯುಕ್ತರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರಿಗೆ ದಿನಾಂಕ:06–08–2009 ರಂದು ಕೋರಿಕೊಂಡಿರುತ್ತೇನೆ. ಈಗ ಆ ಮನವಿ ಪತ್ರವನ್ನು ಗುರುತಿಸುತ್ತಿದ್ದು, ಅದನ್ನು ಪಿ–6 ಎಂದು ಅದರಲ್ಲಿನ ನನ್ನ ಸಹಿಯನ್ನು ಪಿ–6(ಎ) ಎಂದು ಗುರುತಿಸಲಾಯ್ತು.

ವಾಹನ ಸಂಖ್ಯೆ: ಕೆಎ–28–ಎ–1689 ನ್ನು ಅಕ್ರಮವಾಗಿ ಸ್ಪಿರಿಟ್ ಸಾಗಾಣಿಕೆಗಾಗಿಯೇ ಬಳಸಲಾಗಿರುವುದರಿಂದ ವಾಹನ ಹಾಗೂ ಸ್ಪಿರೀಟ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ.

ಪಾಟೀ ಸವಾಲು ಯಾರದ್ದೂ ಇರುವುದಿಲ್ಲ.

ಈ ಎರಡು ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಿದಾಗ ದಿನಾಂಕ:05–08–2009 ರ ಬೆಳಗಿನ ಜಾವ 5.30 ಸಮಯದಲ್ಲಿ ಶಿವಮೊಗ್ಗ ನಗರದಲ್ಲಿ ಹೊಳೆಹೊನ್ನೂರು ರಸ್ತೆಯಲ್ಲಿರುವ ರೈಲ್ವೇ ಗೇಟ್ ಹತ್ತಿರ ರಸ್ತೆಗಾವಲು ಮಾಡುವಾಗ ವಾಹನ ಲಾರಿ ಸಂ:ಕೆಎ–28–ಎ–1689 ರಲ್ಲಿ 35 ಲೀ. ಸಾಮರ್ಥ್ಯದ 172 ಕ್ಯಾನ್‌ಗಳಲ್ಲಿ ಸ್ಪಿರಿಟ್ ಅನ್ನು ಅಕ್ರಮವಾಗಿ ಹೊಂದಿ ಸಾಗಾಣಿಕೆ ಮಾಡಲಾಗುತ್ತಿತ್ತು ಎಂಬುದು ಖಚಿತವಾಗುತ್ತದೆ. ಈ ಅಂಶವು ಪ್ರ.ಸ. 1 ರವರು ನುಡಿದ ಸಾಕ್ಷಿ ಹೇಳಿಕೆಯಿಂದ ವ್ಯಕ್ತವಾಗುತ್ತದೆ. ವಾಹನದ ಮಾಲೀಕರ ಪರವಾಗಿ ಈ ಸಾಕ್ಷಿದಾರರನ್ನು ಯಾರು ಪಾಟೀ ಸವಾಲು ಮಾಡಲು ಈ ಪ್ರಾಧಿಕಾರದ ಮುಂದೆ ಹಾಜರಿರುವುದಿಲ್ಲ. ಆದ್ದರಿಂದ ಪರಿಶೀಲನಾಂಶ 1 ನ್ನು ಸಕರಾತ್ಮಕವಾಗಿ ಪರಿಗಣಿಸುತ್ತೇನೆ.

**ವಿವಾದಾಂಶ – 2**

ವಾಹನದ ಮಾಲೀಕರು ಇಲ್ಲವೆ ಅವರ ಪ್ರತಿನಿಧಿ ಇಲ್ಲವೆ ವಾಹನವನ್ನು ಜಪ್ತು ಮಾಡಿದ ಕಾಲಕ್ಕೆ ಅದರ ಸುಪರ್ದಿ ಹೊಂದಿದ ವ್ಯಕ್ತಿ ಇವರುಗಳು ಸದರಿ ವಾಹನದಲ್ಲಿ ಕಾನೂನು ಬಾಹಿರವಾಗಿ ಮದ್ಯಸಾರ ಸಾಗಾಟ ಮಾಡಿರುವುದು ತಮ್ಮ ತಿಳುವಳಿಕೆ ಅಥವಾ ಪರಿಜ್ಞಾನದಿಂದ ಉಂಟಾಗಿರುವುದಿಲ್ಲವೆಂದು ಹಾಗೂ ಸದರಿ ವಾಹನವನ್ನು ಅಕ್ರಮವಾಗಿ ಮದ್ಯಸಾರ ಸಾಗಾಟ ಮಾಡಲು ಉಪಯೋಗಿಸದಂತೆ ಸಮರ್ಪಕ ಹಾಗೂ ಅಗತ್ಯ ಮುಂಜಾಗ್ರತ ಕ್ರಮ ತೆಗೆದುಕೊಂಡ ಬಗ್ಗೆ ಸಾಬೀತುಪಡಿಸಲಿಕ್ಕಾಗಿ ಈ ಪ್ರಾಧಿಕಾರದ ಮುಂದೆ ಯಾರೂ ಹಾಜರಾಗದ ಕಾರಣ 2ನೇ ವಿವಾದಾಂಶವನ್ನು ನಕರಾತ್ಮಕವಾಗಿ ಪರಿಗಣಿಸುತ್ತೇನೆ.

**ವಿವದಾಂಶ – 3**

ರಾಸಾಯನಿಕ ವಿಶ್ಲೇಷಕರ ವರದಿ ಅನ್ವಯ ಪ್ರಕರಣದಲ್ಲಿ ಜಪ್ತು ಪಡಿಸಲಾದ ಸದ್ರಿ ದ್ರವದಲ್ಲಿ ಆಲ್ಕೋಹಾಲ್ ಪ್ರಮಾಣ ಇರುವುದು ಹಾಗೂ ಅದು ಸ್ಪಿರೀಟ್ ಎಂದು ಖಚಿತವಾಗುತ್ತದೆ. ಇದರಿಂದ ವಾಹನ ಲಾರಿ ಸಂ:ಕೆಎ–28–ಎ–1689 ರಲ್ಲಿ ಅಕ್ರಮವಾಗಿ ಸಾಗಿಸಲಾಗುತ್ತಿದ್ದ ದ್ರವವು ಅಬಕಾರಿ ಪದಾರ್ಥವಾಗಿರುವುದು ಸ್ಪಷ್ಟವಾಗುತ್ತದೆ. ಇದು ಪ್ರ.ಸ–1 ಹಾಗೂ ಪ್ರ.ಸ–2 ರ ಸಾಕ್ಷಿ ಹೇಳಿಕೆಯಿಂದ ವ್ಯಕ್ತವಾಗುತ್ತದೆ. ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ರಡಿಯಲ್ಲಿ ಅಬಕಾರಿ ಪದಾರ್ಥದ ಅಕ್ರಮ ಸಾಗಾಟದಲ್ಲಿ ಜಪ್ತು ಪಡಿಸಲಾದ ಇತರೆ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶ ಇರುವುದರಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾದ ವಾಹನ ಲಾರಿ ಸಂ:ಕೆಎ–28–ಎ–1689 ನ್ನು ಮತ್ತು 35 ಲೀಟರ್ ಸಾಮಾರ್ಥ್ಯದ 172 ಕ್ಯಾನ್‌ಗಳಲ್ಲಿರುವ ಒಟ್ಟು 6020 ಲೀಟರ್ ಮದ್ಯಸಾರವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ. ಆದ್ದರಿಂದ 3ನೇ ವಿವಾದಾಂಶಕ್ಕೆ ಸಕರಾತ್ಮಕವಾಗಿ ಪರಿಗಣಿಸುತ್ತೇನೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ**

ಶ್ರೀ ಜೆ. ಕೃಷ್ಣ, ಪ್ರಾಧೀಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ)(1) ರನ್ವಯ ಮುಟ್ಟುಗೋಲು ಹಾಕಿಕೊಳ್ಳುವ ಪೂರ್ವದಲ್ಲಿ ಅನುಸರಿಸಬೇಕಾದ ನಿಯಮಗಳನ್ನು ಅನುಸರಿಸಿದ ನಂತರ ಠಾಣಾಧಿಕಾರಿಗಳು ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಶಿವಮೊಗ್ಗ ರವರ ಗುನ್ನೆ ಸಂಖ್ಯೆ: 15/2009 ದಿನಾಂಕ: 05–08–2009 ರಲ್ಲಿ ಜಪ್ತು ಪಡಿಸಲಾದ ವಾಹನ ಲಾರಿ ಸಂ:ಕೆಎ–28–ಎ–1689 ನ್ನು ಮತ್ತು 35 ಲೀಟರ್ ಸಾಮಾರ್ಥ್ಯದ 172 ಕ್ಯಾನ್‌ಗಳಲ್ಲಿನ 6020 ಲೀಟರ್ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ರಾಸಾಯನಿಕ ವಿಶ್ಲೇಷಣೆಗೆ ತೆಗೆದ 4 ಲೀಟರ್ ಮದ್ಯಸಾರವನ್ನು ಹೊರತುಪಡಿಸಿ ಉಳಿದ 6016 ಲೀಟರ್ ಮದ್ಯಸಾರವನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ)(3) ರ ರೀತ್ಯಾ ಅಬಕಾರಿ ಉಪ ಅಧೀಕ್ಷಕರು, ಶಿವಮೊಗ್ಗ ಉಪ ವಿಭಾಗ ಇವರ ಸಮಕ್ಷಮ ನಾಶಪಡಿಸಲು ಹಾಗೂ 35 ಲೀಟರ್ ಸಾಮಾರ್ಥ್ಯದ 172 ಖಾಲಿ ಕ್ಯಾನ್‌ಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:11–01–2010 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

1. ಪ್ರ.ಸ–1 – ಶ್ರೀ ಎಸ್.ಕೆ. ಪ್ರಹ್ಲಾದ್
ಅಂದಿನ ಪೊಲೀಸ್ ಇನ್ಸ್‌ಪೆಕ್ಟರ್,
ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ,
ಶಿವಮೊಗ್ಗ.

2. ಪ್ರ.ಸ-2 – ಶ್ರೀ ಜಿ.ಹೆಚ್. ನೂರುಂದಪ್ಪ
ಮುಖ್ಯಪೇದೆ,
ಅಂದಿನ ಠಾಣಾಧಿಕಾರಿಗಳು,
ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ,
ಶಿವಮೊಗ್ಗ.

**ಅನುಬಂಧ-2**

**ಪ್ರತಿವಾದಿಗಳ ಪರ ಸಾಕ್ಷಿಗಳು**

ಯಾರೂ ಇರುವುದಿಲ್ಲ.

**ಅನುಬಂಧ-3**

**ಫಿರ್ಯಾದು ಪರ ಮಂಡಿಸಲಾದ ದಾಖಲಾತಿಯ ವಿವರ**

1. ನಿಶಾನೆ ಪಿ-1 – ಸ್ಥಳ ಪಂಚನಾಮೆ
2. ನಿಶಾನೆ ಪಿ-2 – ಫಿರ್ಯಾದುದಾರರು ಸಲ್ಲಿಸಿದ ದೂರು
3. ನಿಶಾನೆ ಪಿ-3 – ಪ್ರಥಮ ವರ್ತಮಾನ ವರದಿ
4. ನಿಶಾನೆ ಪಿ-4 – ಅಮಾನತ್ತು ವರದಿ (ಪಿಎಫ್)
5. ನಿಶಾನೆ ಪಿ-5 – ಅಬಕಾರಿ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ ಮನವಿ ಪತ್ರ
6. ನಿಶಾನೆ ಪಿ-6 – ರಾಸಾಯನಿಕ ವಿಶ್ಲೇಷಕರ ವರದಿ

**ಅನುಬಂಧ-4**

**ಪ್ರತಿವಾದಿ ಪರ ಮಂಡಿಸಲಾದ ದಾಖಲಾತಿಗಳು**

ಯಾವುದೂ ಇರುವುದಿಲ್ಲ.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.170

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:70(ಪೊಲೀಸ್)/2009-10, ದಿನಾಂಕ:22ನೇ ಅಕ್ಟೋಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಅ.ಜಾ. ಮತ್ತು ಲಾ.ನಿ.ದ.<br>ವಿಶೇಷ ಪೊಲೀಸ್ ಠಾಣೆ,<br>ಮೈಸೂರು ಜಿಲ್ಲೆ. | | ಪುಟ್ಟಜೋಗಪ್ಪ ಬಿನ್ ಜವರನಾಯ್ಕ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:31.08.2009ರಂದು ಬೆಳಿಗ್ಗೆ 10:15 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಅ.ಜಾ. ಮತ್ತು ಲಾ.ನಿ.ದ. ವಿಶೇಷ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇವರು ಕೆ.ಆರ್.ನಗರ ತಾ: ದೊಡ್ಡೇಕೊಪ್ಪಲು ಗ್ರಾಮದ ಗೇಟ್ ಬಳಿ ಹತ್ತಿರ ಅಕ್ರಮವಾಗಿ 8.640 ಲೀ. ಮದ್ಯವನ್ನು ಕೆಎ-04/ಕ್ಯೂ-1851 ನೋಂದಣಿ ಸಂಖ್ಯೆಯ ಕೈನೆಟಿಕ್ ಹೋಂಡಾ ವಾಹನದಲ್ಲಿ

ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:29/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಆರೋಪಿಗಳನ್ನು ದಸ್ತಗಿರಿ ಮಾಡಿ, ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ದಿನಾಂಕ:01.09.2009ರಂದು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿ, ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ದಿನಾಂಕ:11.09.2009ರಂದು ಕೆ.ಆರ್.ನಗರ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಬೆಂಗಳೂರು ಉತ್ತರ ವಲಯದ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:24.09.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:31.08.2009ರಂದು ಕೆ.ಆರ್. ನಗರ ತಾ: ದೊಡ್ಡೇಕೊಪ್ಪಲು ಗ್ರಾಮದ ಗೇಟ್ ಬಳಿ ಹತ್ತಿರ ಅಕ್ರಮವಾಗಿ 8.640 ಲೀ. ಮದ್ಯವನ್ನು ಕೆಎ–04/ಕ್ಯೂ–1851 ನೋಂದಣಿ ಸಂಖ್ಯೆಯ ಕೈನೆಟಿಕ್ ಹೋಂಡಾ ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಬಗ್ಗೆ ವಾಹನದ ಮಾಲೀಕರು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (2) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:70(ಪೊಲೀಸ್)/2009–10, ದಿನಾಂಕ:22ನೇ ಅಕ್ಟೋಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:29/2009, ದಿನಾಂಕ:31.08.2009 ರಂದು ವಶಪಡಿಸಿಕೊಂಡ ಕೆಎ–04/ಕ್ಯೂ–1851 ನೋಂದಣಿ ಸಂಖ್ಯೆಯ ಕೈನೆಟಿಕ್ ಹೊಂಡಾ ವಾಹನವನ್ನು (8.640 ಲೀ. ಮದ್ಯವನ್ನು ಮಾದರಿ ಹೊರತುಪಡಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಅಕ್ಟೋಬರ್ ತಿಂಗಳ 22ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

**ಡಾ॥ ವೈ. ಮಂಜುನಾಥ್**

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್

ಹಾಗೂ ಅಧಿಕೃತ ಅಧಿಕಾರಿಗಳು,

ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1197

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್:228/2008-09, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬ್ಕಾರಿ ಉಪ ನಿರೀಕ್ಷಕರು,<br>ಟಿ.ನರಸೀಪುರ ವಲಯ,<br>ಟಿ.ನರಸೀಪುರ. | | 1) ವಿಶೇಷ ಬಿನ್ ಚುಂಚಯ್ಯ<br>ಪರಾರಿಯಾಗಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:02.11.2008ರಂದು ರಾತ್ರಿ 10:30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಟಿ.ನರಸೀಪುರ ವಲಯ, ಇವರು ಟಿ. ನರಸೀಪುರ ತಾಲ್ಲೂಕು, ಯಡಹಳ್ಳಿಯಿಂದ ಬನ್ನೂರು-ಮಂಡ್ಯ ಮುಖ್ಯ ರಸ್ತೆಗೆ ಸೇರುವ ತಿರುವಿನಲ್ಲಿ ಅಕ್ರಮವಾಗಿ 17.280 ಲೀ. ನಕಲಿ ಮದ್ಯವನ್ನು ಕೆಎ-17/ಇ-7544 ನೋಂದಣಿ ಸಂಖ್ಯೆಯ ಹೀರೋ ಹೊಂಡಾ ಸಿಡಿ-100 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:10/2008-09 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14ರ ರೀತ್ಯಾ ಅಪರಾಧವಾಗಿದ್ದ, ಕಲಂ 32, 38(ಎ) ಮತ್ತು 43ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಆರೋಪಿಗಳು ತಲೆ ಮರೆಸಿಕೊಂಡಿರುವುದಾಗಿ ನಮೂದಿಸಿ, ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ದಾವಣಗೆರೆ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:03.12.2008ರಂದು ಪತ್ರ ಬರೆಯಲಾಗಿದೆ. ಅದರಂತೆ 'ಬಿ' ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಬಿ.ಟಿ. ಶ್ರೀನಿವಾಸ ರೆಡ್ಡಿ ಬಿನ್ ತಿಮ್ಮರೆಡ್ಡಿ, ಜಗಳೂರು ಗ್ರಾಮ, ದಾವಣಗೆರೆ ಜಿಲ್ಲೆ ಇವರ ಒಡೆತನದಲ್ಲಿರುವುದು 'ಬಿ' ವಹಿಯಿಂದ ದೃಢಪಟ್ಟಿರುತ್ತದೆ. ಸದರಿ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿನಾಂಕ:30.01.2009 ರಂದು ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಅಂಬುಜ ಎಂಬುವವರು ನೋಟೀಸ್‌ನ್ನು ಪಡೆದು, ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ದಿನಾಂಕ:18.03.2009 ರಂದು ಸ್ವೀಕೃತವಾಗಿರುತ್ತದೆ.

ಕಡತ ಪರಿಶೀಲಿಸಲಾಯಿತು. ದಿನಾಂಕ:02.11.2008 ರಂದು ಟಿ.ನರಸೀಪುರ ತಾಲ್ಲೂಕು, ಯಡಹಳ್ಳಿಯಿಂದ ಬನ್ನೂರು-ಮಂಡ್ಯ ರಸ್ತೆಗೆ ಸೇರುವ ತಿರುವಿನಲ್ಲಿ ಅಕ್ರಮವಾಗಿ 17.280 ಲೀ. ನಕಲಿ ಮದ್ಯವನ್ನು ಕೆಎ-17/ಇ-7544 ನೋಂದಣಿ ಸಂಖ್ಯೆಯ ಹೀರೋ ಹೊಂಡಾ ಸಿಡಿ-100 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಗಳು ತಲೆ ಮರೆಸಿಕೊಂಡಿರುತ್ತಾನೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಪ್ರಥಮ ಮಾಹಿತಿ ವರದಿಯಲ್ಲಿ ಆರೋಪಿಗಳು ತಲೆ ಮರೆಸಿಕೊಂಡಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ ನಿರೂಪಿಸಲು ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಮಾರಾಟ ಮತ್ತು ಸಾಗಾಣಿಕೆಯಂತಹ ವ್ಯವಹಾರದಲ್ಲಿ ತೊಡಗಿ, ಇಂತಹ ಮಾದಕ ದ್ರವ್ಯಗಳನ್ನು ಮುಗ್ಧ ಜನರು ಸೇವಿಸಿ, ತಮ್ಮ ಪ್ರಾಣ ಕಳೆದುಕೊಳ್ಳುವುದಲ್ಲದೇ, ಸಮಾಜದ ಮೇಲೆ ದುಷ್ಪರಿಣಾಮ ಉಂಟಾಗುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಇದು ಅಲ್ಲದೇ ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟು ಮಾಡುತ್ತಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:228/2008–09, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ಟಿ.ನರಸೀಪುರ ವಲಯ, ಟಿ.ನರಸೀಪುರ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 10/2007–08, ದಿನಾಂಕ:02.11.2008 ರಂದು ವಶಪಡಿಸಿಕೊಂಡ ಕೆಎ–17/ಇ–7544 ನೋಂದಣಿ ಸಂಖ್ಯೆಯ ಹೀರೋ ಹೊಂಡಾ ಸಿಡಿ–100, ವಾಹನ ಮತ್ತು 17.280 ಲೀ. ನಕಲಿ ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

**ಡಾ|| ವೈ. ಮಂಜುನಾಥ್**

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್

ಹಾಗೂ ಅಧಿಕೃತ ಅಧಿಕಾರಿಗಳು,

ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–553

**ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರ ಕಛೇರಿ, ಅರಣ್ಯಭವನ, ಮಲ್ಲೇಶ್ವರಂ**

**ಅಧಿಕೃತ ಜ್ಞಾಪನ**

**ಸಂಖ್ಯೆ: ಬಿ3/ಸೇಲ್ಸ್/ಸೀನಿಯರೇಜ್ ದರ–9/09–10, ಬೆಂಗಳೂರು, ದಿನಾಂಕ:13ನೇ ಜನವರಿ, 2010**

**ವಿಷಯ:** ಮರಗಳ ಮತ್ತಿತರ ಅರಣ್ಯ ಉತ್ಪತ್ತಿಯ ಮೇಲಿನ ಟಂಕತನದ ತೆರುಳಿ ದರಗಳನ್ನು (Seigniorage rates) ಪರಿಷ್ಕರಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಪತ್ರದ ಸಂಖ್ಯೆ: ಎ6(ಎ)/ಸಿಆರ್–33/ಸೀನಿಯರೇಜ್ ದರ /06–07 ದಿನಾಂಕ: 14.1.2008
2. ಸರ್ಕಾರದ ಪತ್ರದ ಸಂಖ್ಯೆ: ಅಪಜೀ 149 ಎಫ್‌ಡಿಪಿ 2003 ದಿನಾಂಕ: 17.08.2007

**ಪ್ರಸ್ತಾವನೆ:**

ಮರಗಳ ಮತ್ತಿತರ ಅರಣ್ಯ ಉತ್ಪತ್ತಿಯ ಮೇಲಿನ ಟಂಕತನದ ತೆರುವಳಿ (ಸೀನಿಯರೇಜ್) ದರಗಳನ್ನು ಮೇಲಿನ (1) ರಲ್ಲಿ ಓದಲಾಗಿರುವ ಆದೇಶದಲ್ಲಿರುವ ದಿನಾಂಕ:01.01.2008 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಿ ಆದೇಶ ಹೊರಡಿಸಿದ್ದು, ಉಲ್ಲೇಖ (2) ರಲ್ಲಿ ಓದಲಾದ ಪತ್ರದಲ್ಲಿ ಪ್ರತಿ ಎರಡು ವರ್ಷಕ್ಕೊಮ್ಮೆ ತೆಂಕಣ ತೀರುವಳಿ ದರಗಳನ್ನು ಪರಿಷ್ಕರಿಸಬೇಕಾಗಿದ್ದು, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಈ ಬಗ್ಗೆ ಅಧಿಕಾರ ನೀಡಿರುವುದರಿಂದ ಈ ಕೆಳಕಂಡ ಆದೇಶ.

**ಆದೇಶ**

ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದ ಕಲಂ 6 ರಲ್ಲಿರುವಂತೆ ಮರಗಳ ಮತ್ತಿತರ ವಿವಿಧ ಅರಣ್ಯ ಉತ್ಪನ್ನಗಳ ಪರಿಷ್ಕರಿಸಿದ ಟಂಕತನ ತೆರುವಳಿ (Seigniorage rates) ದರಗಳನ್ನು ದಿನಾಂಕ:01.01.2010 ರಿಂದ ಅನ್ವಯವಾಗುವಂತೆ ಜಾರಿಗೊಳಿಸಿ ಆದೇಶಿಸಲಾಗಿದೆ.

ಪ್ರಧಾನ ಮುಖ್ಯ ಅರಣ್ಯ
ಸಂರಕ್ಷಣಾಧಿಕಾರಿ
(ಅರಣ್ಯ ಪಡೆ ಮುಖ್ಯಸ್ಥರು)

**Annexure to OM No. B3/Sales/Seigniorage rate-09/2009-10 dated -- Revision of Seigniorage rates**

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| | **Group I** | | | | | |
| 1 | Dalbergia latifolia | Beete, Beeti | 36,000 | 50,800 | 54000 | |
| 2 | Tectona grandis | Saguvani, Thega, Teak | 35,000 | 44,200 | 52500 | |
| | **Group II** | | | | | |
| 3 | Diospyros mclanoxylon | Ebony, Karimara | 40,000 | 54,856 | 60000 | |
| | **Group III** | | | | | |
| 4 | Pterocarpus marsupium | Honne, Bijasal, Venugai, Vengal | 12,850 | 15,905 | 19275 | |
| | **Group IV** | | | | | |
| 5 | Artocarpus hirsuta | Hebbalasu, Aini, Angili | 10,000 | 13,098 | 14000 | |
| 6 | Cordia macleodii | Hadaga | 9,000 | 12,773 | 12600 | |
| 7 | Dysoxylon malabaricum | White Cedar, Bilidevadari, Vellangi, Devagarige | 35,000 | 28,925 | 49000 | |
| 8 | Hopea parviflora | Kiralbhogi, Boga | 9,000 | 13,315 | 12600 | |
| 9 | Lagerstroemia lanceolata | Nandi, Benteak, Nana | 10,000 | 13,811 | 14000 | |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 10 | Mesua ferrea | Nagasampige, Atta, Nagakesara, Nangal | 7,000 | 9,500 | 9800 | |
| 11 | Ougenia dalbergioides | Betta-honne, Karimuttal | 6,000 | 8,415 | 8400 | |
| 12 | Terminalia tomentosa | Mathi, Nalamaddi, Laurel | 8,200 | 11,113 | 11480 | |
| | **Group V** | | | | | |
| 13 | Accrocarpus frxinifolius | Balanji | 4,000 | 4,984 | 5600 | |
| 14 | Adina cordifolia | Haldu, Yethiga, Heddi | 8,500 | 13,116 | 11900 | |
| 15 | Albizzia lebbek | Bage, Kekke, Dilisana | 7,500 | 8,704 | 10500 | |
| 16 | Albizzia odoratissima | Bilwara, Kalasiris | 7,000 | 10,487 | 9800 | |
| 17 | Anthocephalus cadamba | Atta | 3,300 | 4,108 | 4620 | |
| 18 | Bombax insigne | Beng (large flowered and capsulated silk cotton) | 3,300 | 4,087 | 4620 | |
| 19 | Calophyllum tomentosum | Poon, Surohonne | 5,500 | 8,228 | 7700 | |
| 20 | Dipterocarpus indicus | Gurjan, Kalpine | 4,500 | 5,460 | 6300 | |
| 21 | Elaeocarpus oblongus (Syn. E. Serratus) | Bikki, Guddarong, Dundate | 3,500 | 3,942 | 4900 | |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 22 | Evodia roxburghaiana | Makali, Mankali, Chattuva, Aspin | 4,000 | 5,255 | 5600 | |
| 23 | Litsea Zeylanica | Massi | 9,000 | 12,086 | 12600 | |
| 24 | Shorea tallura | Jalari, Bilibevu | 5,500 | 10,726 | 7700 | |
| 25 | Stephegyne parviflora (syn. Mitragyna parviflora) | Kalam, Kadaval, Phaldu | 5,000 | 6,359 | 7000 | |
| 26 | Symplocos spicata | Chunga | 3,500 | 3,625 | 4900 | |
| 27 | Toona ciliata | Red cedar, Laldevadari, Noga | 3,500 | 4,384 | 4900 | |
| 28 | Vateria indica | Saldhupa | 4,500 | 4,968 | 6300 | |
| | **Group VI** | | | | | |
| 29 | Artocarpus integrigfolia | Halasu, Jack fruit, Fanas | 12,000 | 13,028 | 16800 | |
| 30 | Calophyllum wightianum | Holehonne, Bobbi | 4,000 | 4,490 | 5600 | |
| 31 | Chukrassia tabularis | Kalgarige, Devala, Chukrassia, Indian Mahagony | 4,000 | 6,223 | 6200 | |
| 32 | Eugenia jambolana | Jamun, Neralu | 4,500 | 6,368 | 6300 | |
| 33 | Gmalina arborea | Shivane, Gumanadi, Ghamertak | 4,500 | 5,976 | 6300 | |
| 34 | Grewia tiliaefolia | Dhaman, Toda, Thadsal, Thadachi | 6,000 | 7,740 | 8400 | |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 35 | Hardwickia binata | Kamara, Yeppi, Anjan, Karachi | 3,800 | 4,250 | 5320 | |
| 36 | Lophopetalum wightianum | Banata, Balapale | 4,000 | 4,490 | 5600 | |
| 37 | Madhuca longifolia | Mahuva, Mohwam, Dodda ippe | 4,000 | 4,400 | 5600 | |
| 38 | Mimusops elengi | Bankula, Nanje, Ranja | 5,000 | 7,759 | 7500 | |
| 39 | Tamarindus indica | Hunase, Imli, Amli | 3,500 | 4,370 | 4900 | |
| 40 | Terminalia paniculata | Kindal, Hunal, Hulvev, Pillamardu | 7,200 | 9,251 | 10080 | |
| 41 | Vitex altissima | Baranagi, Naviladi | 6,500 | 9,997 | 10000 | |
| 42 | Xylia xylocarpa | Jambe | 6,200 | 9,632 | 9500 | |
| | **Group VII** | | | | | |
| 43 | Acacia spp. (excluding A. nilotica and A. catechu) | | 6,000 | 7,225 | 8400 | |
| 44 | Ailanthus excelsa | Dodamara | 4,000 | 4,726 | 5600 | |
| 45 | Albizzia procera | Bellata, Safedairial | 4,500 | 5,009 | 6300 | |
| 46 | Alsiodaphne semicarpifolia | Phadus | 3,600 | 6,167 | 6000 | |
| 47 | Alstonia scholaris | Satwin, Kadusali, Maddale | 3,500 | 4,467 | 4900 | |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 48 | Anogeissus latifolia | Dindal, Dindiga, Vellangi | 4,500 | 5,501 | 6300 | |
| 49 | Artocarpus lakoocha | Wonte, Watehuli | 4,000 | 5,109 | 5600 | |
| 50 | Bombax ceiba | Booruga, Simal, Silk, Cotton | 4,000 | 5,284 | 5600 | |
| 51 | Boswellia serrata | Salai, Anduk, Sambrani | 4,000 | 4,017 | 5600 | |
| 52 | Bridelia retusa | Goji, Kavarde | 4,000 | 3,877 | 5600 | |
| 53 | Canarium strictum | Kaidhupa, Bandapaini | 4,000 | 5,212 | 5600 | |
| 54 | Chloroxylon swietinia | Hurugalu, Satinwood | 5,000 | 5,603 | 7000 | |
| 55 | Dischopsis elliptica (Syn. Palaquium ellipticum) | Pali, Hadasalu | 4,500 | 5,108 | 6300 | |
| 56 | Elaeocarpus tuberculatus | Rudraksha, Sattaga | 3,600 | 4,796 | 5040 | |
| 57 | Garuga pinnata | Godda | 3,600 | 5,111 | 5040 | |
| 58 | Hardwickia pinnata | | 3,600 | 4,833 | 5040 | |
| 59 | Holigarna arnottiana | | 3,600 | 4,649 | 5040 | |
| 60 | Hopea wightiana | Halga, Kabri | 4,000 | 5,204 | 5600 | |
| 61 | Hymenodiction excelsum | Doddathoppe | 4,500 | 5,509 | 6300 | |
| 62 | Machilus macarantha | Gulmavu, Kulirmavu | 3,500 | 5,148 | 4900 | |
| 63 | Mangifera indica | Mavu, Mango | 4,000 | 5,063 | 5600 | |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 64 | Melia indica / M.dubia | Bevu, Neem, Margosa | 4,500 | 6,070 | 6300 | |
| 65 | Michelia champaca | Sampige, Champak, Kolasampige | 4,000 | 6,899 | 6800 | |
| 66 | Schleichera trijuga / S. oleosa | Kendala, Sagade, Kusum, Purka | 5,200 | 6,567 | 7280 | |
| 67 | Spondias acuminata | Doddamete, Ambod, Radembale | 3,600 | 4,613 | 5040 | |
| 68 | Spondias mangifera | Amate | 3,200 | 4,405 | 4480 | |
| 69 | Stereospermum xylocarpum | Genasu | 3,750 | 4,978 | 5250 | |
| 70 | Strychnos nuxvomica | Kajari, Kasaka, Marking nut | 3,700 | 5,032 | 5180 | |
| 71 | Terminalia arjuna | Holematti, Thoremathi, Bilimathi | 3,800 | 4,517 | 5320 | |
| 72 | Terminalia chebula | Hale, Galnut, Harada, Myrobolan | 3,600 | 4,517 | 5040 | |
| 73 | Tetrameles nudiflora | Jernal, Chenni, Bondale, Maine, Bolur | 4,000 | 4,669 | 5600 | |
| | | **Group VIII** | | | | |
| 74 | Acacia nilotica | Jali, Karijali | 5,000 | 6,260 | 7000 | |
| 75 | Adenanthera pavinia | Manjuti | 3,600 | 4,383 | 5040 | |
| 76 | Ailanthus malabaricum | Halmaddi | 3,600 | 4,834 | 5040 | |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 77 | Amoora canarana | Tottile | 3,600 | 4,674 | 5040 | |
| 78 | Antiaria toxicaria | Jasund, Chandul | 3,600 | 5,143 | 5040 | |
| 79 | Bauhinia reticulata | Basavanapada | 3,400 | 4,204 | 4760 | |
| 80 | Bischofia javaica | Neeli, Govarnelu, Nira, Thirupu | 3,400 | 4,144 | 4760 | |
| 81 | Buchanania latifolia | Murukali, Nurkal, Chironjee | 3,600 | 4,542 | 5040 | |
| 82 | Carallia integerrina | Punchi | 3,650 | 4,648 | 5110 | |
| 83 | Celestrus species | Karigarane | 3,650 | 4,506 | 5110 | |
| 84 | Cinnaomum Verum | dalchini | 3,700 | 4,435 | 5180 | |
| 85 | Cleistanthus colonius | Nalkordsha | 3,600 | 3,829 | 5040 | |
| 86 | Dillenia pentagyna | Kanagalu, Kolategu, Malageil | 3,600 | 4,200 | 5040 | |
| 87 | Dispyros microphylla | Chorkali | 3,500 | 3,647 | 4900 | |
| 88 | Erythrina indica | Hongara, Panvala | 3,600 | 3,969 | 5040 | |
| 89 | Eugenia garderi | Chikkani | 3,500 | 5,197 | 5200 | |
| 90 | Ficus asperime | | 4,500 | 5,372 | 6300 | |
| 91 | Ficus glomerata | | 3,600 | 4,447 | 5040 | |
| 92 | Ficus nervosa | | 3,600 | 4,438 | 5040 | |
| 93 | Ficus steilla | | 3,600 | 4,438 | 5040 | |
| 94 | Flaccourtia montana | Sampi | 3,500 | 4,138 | 4900 | |
| 95 | Gareinia cambogia | Uppage, Aradaia | 3,500 | 4,060 | 4900 | |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 96 | Gravellia robusta | Silver oak, Vellangi | 4,000 | 5,114 | 5600 | |
| 97 | Gyracarpus jacquini | | 3,750 | 4,977 | 5250 | |
| 98 | Holoptelia beddomeii | | 3,300 | 4,243 | 4620 | |
| 99 | Holoptelia integrifolia | Thapasi, Kaladri, Kanju | 3,650 | 4,385 | 5110 | |
| 100 | Kydia calycina | Belaga, Bende | 3,500 | 4,285 | 4900 | |
| 101 | Lagerstroemia flosregina | Holedasavala | 4,000 | 4,660 | 5600 | |
| 102 | Lagerstroemia parviflora | Channangi | 4,500 | 5,150 | 6300 | |
| 103 | Lannea grandis | Gojjal, Arenelli | 3,500 | 4,203 | 4900 | |
| 104 | Linoceira malabarica | Punisi, Punygam | 3,500 | 4,300 | 4900 | |
| 105 | Madhuca latifolia | Sonnalppe, ippe | 3,000 | 3,571 | 4200 | |
| 106 | Mastrixia arborea | | 3,600 | 4,475 | 5040 | |
| 107 | Miscellaneous junglewoods not specified in the above list | Kadujati | 4,500 | 5,100 | 6300 | |
| 108 | Myristica magnifica | Ramanadike | 3,300 | 4,244 | 4620 | |
| 109 | Myristica malabaric | Ramapathre | 3,900 | 4,299 | 5460 | |
| 110 | Polyalthia species | Asoka | 3,900 | 4,513 | 5460 | |
| 111 | Pongamia glabra (syn. P. Pinnata) | Honge | 3,900 | 4,563 | 5460 | |
| 112 | Pteropermum heyneamum heyneamua | Polavu, Thopa | 3,300 | 4,210 | 4620 | |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 113 | Saccopetalum tomentosum | Obalu, Kaladri | 3,300 | 4,292 | 4620 | |
| 114 | Sapindus emarginatus | Soapnut, Untuwala | 3,500 | 4,331 | 4900 | |
| 115 | Schrebera Sweitenoides | Kolgotee, Savige | 3,600 | 4,335 | 5040 | |
| 116 | Semicarpus anacardium | Geru, Cashew nut | 3,800 | 4,512 | 5320 | |
| 117 | Soymida febrifuga | Savmi, Some, Kalgarige | 3,600 | 5,054 | 5040 | |
| 118 | sterculia alata | Kaithali | 3,750 | 4,533 | 5250 | |
| 119 | Stereospermum chelnoides | Udi, Kadalu | 3,750 | 4,413 | 5250 | |
| 120 | Stereospermum villosa | Bilinaru, Savige | 3,750 | 4,439 | 5250 | |
| 121 | Terninalia bellerica | Tare, Ghoting, Shanthi | 3,300 | 4,825 | 4620 | |
| 122 | Terminalia catapa | Badam, Bange, Taree | 3,500 | 4,076 | 4900 | |
| 123 | Trewia nudiflora | Katumbla | 3,600 | 4,162 | 5040 | |
| | **Group IX** | | | | | |
| 124 (a) | Eucalyptus | Nilgiri | | | | |
| | | a) for supply to industries as pulp wood with bark | 775 | 1,070 | 1100 | 325 |
| | | b) without bark | 900 | 1,828 | 1200 | 300 |
| | | c) supply to general public as timber | 2,750 | 3,470 | 3650 | 900 |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 124 (b) | Acacia auriculiformis | | | | | - |
| | | a) for supply to industries as pulp wood with bark | 775 | 1,011 | 1500 | 725 |
| | | b) For without bark | 900 | 1,610 | 1800 | 900 |
| | | c) For supply to general publics as timber | 3,000 | 5,064 | 4500 | 1,500 |
| | **Group X** | | | | | |
| 125 | Acacia Catechu | Khair, Kagali, Katechu tree, Kachu | 1,200 | 1,125 | 1680 | |
| | | | 1,500 | 1,427 | 2100 | |
| | | | 1,750 | 1,700 | 2450 | |
| 126 | Borassus flabellifer | Palmyra tree, Thatiningu | 1,200 | 862 | 1680 | |
| 127 | Caryota urens | Bagini | 1,200 | 863 | 1680 | |
| 128 | Phoenix sylvestris | Eechal, date | 1,200 | 863 | 1680 | |
| 129 | Wrigtia tinctoria | Halewood | 6,000 | 5,126 | 8400 | |
| | **Group XI** | | | | | |
| 130 | Teak Poles | | | | | |
| | 6m to 9m | a)40-65cm girth(buttend | 850 | 901 | 1275 | |
| | | b)20-40cm girth(buttend) | 550 | 698 | 825 | |
| | 4m to 6m | a)40-65cm girth(buttend | 500 | 544 | 750 | |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| | | b)20-40cm girth(buttend) | 220 | 378 | 330 | |
| | 2m to 4m | a)40-65cm girth(buttend | 210 | 400 | 315 | |
| | | b)20-40cm girth(buttend) | 145 | 209 | 218 | |
| 131 | Nandi Poles | | | | | |
| | 6 m to 9 | a)40-65cm girth(buttend | 410 | 411 | 574 | |
| | | b)20-40cm girth(buttend) | 175 | 215 | 245 | |
| | 4m to6m | a)40-65cm girth(buttend | 240 | 225 | 336 | |
| | | b)20-40cm girth(buttend) | 115 | 157 | 161 | |
| | 2m to 4m | a)40-65cm girth(buttend | 180 | 213 | 252 | |
| | | b)20-40cm girth(buttend) | 110 | 135 | 154 | |
| 132 | Kindal Poles | | | | | |
| | 6m to 9 m | a)40-65cm girth(buttend | 320 | 390 | 448 | |
| | | b)20-40cm girth(buttend) | 190 | 232 | 266 | |
| | 4m to6m | a)40-65cm girth(buttend | 250 | 282 | 350 | |
| | | b)20-40cm girth(buttend) | 120 | 185 | 168 | |
| | 2m to 4m | a)40-65cm girth(buttend | 175 | 210 | 245 | |
| | | b)20-40cm girth(buttend) | 80 | 140 | 140 | |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 133 | Mathi Poles | | | | | |
| | 6m to 9m | a)40-65cm girth(buttend | 350 | 404 | 490 | |
| | | b)20-40cm girth(buttend) | 185 | 211 | 259 | |
| | 4m to6m | a)40-65cm girth(buttend | 240 | 280 | 336 | |
| | | b)20-40cm girth(buttend) | 120 | 186 | 168 | |
| | 2m to 4m | a)40-65cm girth(buttend | 160 | 217 | 224 | |
| | | b)20-40cm girth(buttend) | 85 | 105 | 119 | |
| 134 | Jungle Poles | | | | | |
| | 6 m to 9 m | a)40-65cm girth(buttend | 175 | 249 | 245 | |
| | | b)20-40cm girth(buttend) | 95 | 136 | 133 | |
| | 4m to6m | a)40-65cm girth(buttend | 110 | 172 | 154 | |
| | | b)20-40cm girth(buttend) | 85 | 121 | 119 | |
| | 2m to 4m | a)40-65cm girth(buttend | 100 | 127 | 140 | |
| | | b)20-40cm girth(buttend) | 45 | 78 | 63 | |
| 135 | Nilgiri poles | | | | | |
| | 6 m to 9 m | a)40-65cm girth(buttend | 160 | 205 | 224 | |

| Sl. No. | Name of the species | Local Name | Existing Seigniorage rate per Cubic meter | Market rates (Rs. per Cubic meter) | Revised Seigniorage rates (Rs. per Cubic meter) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| | | b)20-40cm girth(buttend) | 100 | 110 | 140 | |
| | 4m to6m | a)40-65cm girth(buttend | 95 | 204 | 133 | |
| | | b)20-40cm girth(buttend) | 80 | 93 | 112 | |
| | 2m to 4m | a)40-65cm girth(buttend | 78 | 94 | 109 | |
| | | b)20-40cm girth(buttend) | 50 | 50 | 70 | |
| 136 | Acacia poles | | | | | |
| | 6 m to 9 m | a)40-65cm girth(buttend | 350 | 382 | 490 | |
| | | b)20-40cm girth(buttend) | 180 | 398 | 252 | |
| | 4m to6m | a)40-65cm girth(buttend | 180 | 384 | 252 | |
| | | b)20-40cm girth(buttend) | 130 | 184 | 182 | |
| | 2m to 4m | a)40-65cm girth(buttend | 160 | 195 | 224 | |
| | | b)20-40cm girth(buttend) | 100 | 118 | 140 | |
| | **Group XII** | | | | | |
| 137 | Firewood (all species except teak and rosewood) | | | | | |
| | | a) Rural Malnad | 75 | 246 | 105 | |
| | | b) Urban Malnad and traditional Zone | 120 | 455 | 168 | |

